ಪ್ರಚಾರಪುಸ್ತಕಮಾಲೆ 114

# ಕನ್ನಡದಲ್ಲಿ ಅನುಭಾವ ಸಾಹಿತ್ಯ

ಡಾ. ಎಚ್. ತಿಪ್ಪೇರುದ್ರಸ್ವಾಮಿ



ಪ್ರಚಾರಪುಸ್ತಕಮಾಲೆ—೧೧೪

# ಕನ್ನಡದಲ್ಲಿ ಅನುಭಾವ ಸಾಹಿತ್ಯ

ಡಾ|| ಎಚ್. ತಿಪ್ಪೇರುದ್ರಸ್ವಾಮಿ, ಎಂ.ಎ., ಪಿಎಚ್.ಡಿ.




೧೯೮೦

ಮೊದಲನೆಯ ಮುದ್ರಣ: ೧೯೬೨
ಎರಡನೆಯ ಮುದ್ರಣ: ೧೯೭೦
ಮೂರನೆಯ ಮುದ್ರಣ: ೧೯೮೦
೧೦,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು :
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–೫೭೦೦೦೨



ಮುದ್ರಕರು :
ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾ ನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯ ವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶೆಯನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸಿದ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನಗಳು ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶ ವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಬೇಧಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯ ಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರ ವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯ ವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆ ಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ ಸಾಹಿತ್ಯ ಮತ್ತು ಕಲೆ,

ಮುಂತಾದ ವಿಷಯಗಳನ್ನು ಕುರಿತ ನೂರ ಹದಿಮೂರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಡಾ॥ ಹೆಚ್. ತಿಪ್ಪೆರುದ್ರಸ್ವಾಮಿ ಅವರ 'ಕನ್ನಡದಲ್ಲಿ ಅನುಭಾವ ಸಾಹಿತ್ಯ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ನಾರಾಯಣರಾವ್ ಅಪ್ಪೂರಾವ್ ನಿಕಂ**

೧೧–೫–೧೯೬೨ ವೈಸ್–ಛಾನ್ಸಲರ್

## ವಿಷಯಸೂಚಿಕೆ

# ೧. ಅನುಭಾವ

'ಅನುಭಾವ ಎಂಬ ಮಾತು ಕನ್ನಡದಲ್ಲಿ ಒಂದು ವಿಶಿಷ್ಟವಾದ ಅರ್ಥವನ್ನು ಪಡೆದಿದೆ. ಸಂಸ್ಕೃತದ ಅಲಂಕಾರ ಗ್ರಂಥಗಳಲ್ಲಿ 'ಭಾವ', 'ವಿಭಾವ'. 'ಅನುಭಾವ' ಮುಂತಾದ ಮಾತುಗಳು ಬರುತ್ತವೆ. 'ಅನುಭಾವ' ಎಂಬ ಶಬ್ದಕ್ಕೆ ಅಲ್ಲಿರುವ ಅರ್ಥಕ್ಕಿಂತ ವಿಭಿನ್ನವಾದ ಮತ್ತು ಮಹತ್ವಪೂರ್ಣವಾದ ಅರ್ಥವೊಂದು ಕನ್ನಡ ಸಾಹಿತ್ಯದಲ್ಲಿ ಬೆಳೆದುಬಂದಿತು. "ಅನುಭಾವವೆಂಬುದು ಅಂತರಂಗದ ರತ್ನ", "ಅನುಭಾವವೆಂಬುದು ಆತ್ಮ ವಿದ್ಯೆ, ಅನುಭಾವವೆಂಬುದು ನಿಜನಿವಾಸದಲ್ಲಿರಿಸುವುದು" ಎಂದು ಮುಂತಾಗಿ ಶರಣರು ಹೇಳುವ ಮಾತುಗಳಿಂದ 'ಅನುಭಾವ' ಎಂಬ ಶಬ್ದದ ಈ ಅರ್ಥಕಲ್ಪನೆಯನ್ನು ಮಾಡಿಕೊಳ್ಳಬಹುದು. ಈ ಮಾತಿನಲ್ಲಿ ಶರಣರು ತಮ್ಮ ಜೀವನದ ಅನುಭವಸಂಪತ್ತನ್ನು ತುಂಬಿ ಮಾನವ ಜೀವಿತದ ಮಹೋದ್ದೇಶವನ್ನೇ ಒಳಗೊಳ್ಳಬಲ್ಲ ವ್ಯಾಪಕವಾದ ಅರ್ಥದಿಂದ ಅದನ್ನು ಶ್ರೀಮಂತಗೊಳಿಸಿದರು.

ಇಂಗ್ಲಭಾಷೆಯಲ್ಲಿ ಮಿಸ್ಟಿಸಿಸಮ್ (Mysticism) ಎಂಬ ಮಾತೊಂದಿದೆ. ಕೆಲವು ಸಂದರ್ಭಗಳಲ್ಲಿ ಇದನ್ನು ಗೂಢವಾದುದು, ರಹಸ್ಯವಾದುದು, ತಿಳಿಯಲು ಮತ್ತು ಯೋಗ್ಯ ಕಾರಣಗಳಿಂದ ಸಮರ್ಥಿಸಲು ಅಸಾಧ್ಯವಾದುದು, ಅನಿರ್ದಿಷ್ಟವಾದುದು, ಕೇವಲ ಭಾವನಾತ್ಮಕವಾದುದು ಈ ಮುಂತಾದ ಅರ್ಥಗಳಲ್ಲಿ ಉಪಯೋಗಿಸಿರುವುದು ಕಂಡುಬರುತ್ತದೆ. ಇಷ್ಟೇ ಅಲ್ಲದೆ—ಈ ಪ್ರಪಂಚ ಮತ್ತು ದೇವನನ್ನು ಕುರಿತ ಬಹು ಅಸ್ಪಷ್ಟವಾದ ಮತ್ತು ಭ್ರಾಂತಿಮೂಲವಾದ ಅಭಿಪ್ರಾಯ ಎಂಬ ಅರ್ಥದಲ್ಲಿಯೂ ಮತ್ತು ಐಂದ್ರಜಾಲಿಕ ವಿದ್ಯೆ, ಕನಸುಗಾರನ ವಿಚಿತ್ರ ಮನಸ್ಥಿತಿ

ಮುಂತಾದ ಅರ್ಥಗಳಲ್ಲಿಯೂ ಈ ಮಾತನ್ನು ಅನೇಕವೇಳೆ ಉಪಯೋಗಿಸಿರುವುದುಂಟು.

ಈ ಅರ್ಥಗಳಲ್ಲಿ ಇದನ್ನು ತೆಗೆದುಕೊಂಡಾಗ ಇದಕ್ಕೂ ಅನುಭಾವಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಮಿಸ್ಟಿಸಿಸಮ್ ಎಂಬ ಈ ಪದದ ವ್ಯಾಪ್ತಿ ಕೆಲವು ವೇಳೆ ಊರ್ಧ್ವಮುಖವಾಗಿ ವಿಸ್ತಾರಗೊಂಡು, 'ಜೀವನವನ್ನು ಸಾರ್ಥಕಗೊಳಿಸುವ ಅಂತರಂಗದ ಅನುಭವ' ಎಂಬ ಮಟ್ಟಕ್ಕೇರಿರುವುದನ್ನು ಕಾಣುತ್ತೇವೆ. ಈ ಎರಡನೆಯ ಅರ್ಥದಲ್ಲಿ ತೆಗೆದುಕೊಂಡಾಗ ಮಾತ್ರ ಇದನ್ನು 'ಅನುಭಾವ' ಎಂದು ಕರೆಯಬಹುದು.

ಈ ಪ್ರಪಂಚವನ್ನು ಕಣ್ತೆರೆದು ನೋಡಿ ಇದರ ಸ್ವರೂಪವನ್ನು ಕಂಡು ಬೆರಗಾದ ಮಾನವ, ಇದರ ರಹಸ್ಯವನ್ನು ಅರಿತುಕೊಳ್ಳಲು ಪ್ರಯತ್ನಿಸುತ್ತಾನೆ. ಸೃಷ್ಟಿಯ ಸಮಗ್ರ ಸ್ವರೂಪವನ್ನು ಕಂಡುಕೊಳ್ಳುವ ಈ ಯತ್ನದಲ್ಲಿ ಮೂರು ಮುಖ್ಯ ಮಾರ್ಗಗಳನ್ನು ಕಾಣಬಹುದು. ಮೊದಲನೆಯದು, ಈ ಪ್ರಪಂಚದ ಸತ್ಯವನ್ನೆಲ್ಲಾ ಕೇವಲ ಬುದ್ಧಿಯೊಂದರಿಂದಲೇ ಅಳೆದು ನೋಡುವ ಸಾಹಸ. 'ಜ್ಞಾನ'ವನ್ನು ಪಡೆಯುವುದಕ್ಕೆ ಬುದ್ಧಿಯೊಂದೇ ಸಾಕು. ಬುದ್ಧಿಯಿಂದ ಪಡೆದ ಜ್ಞಾನವೇ ಮನುಷ್ಯನ ಅನುಭವಗಳನ್ನು ನಿರ್ಧರಿಸುತ್ತದೆ. ಅದೊಂದೇ ಜ್ಞಾನದ ಒರೆಗಲ್ಲು— ಎಂಬುದು ಈ ವಾದದ ತಿರುಳು. ಬುದ್ಧಿಯೊಂದನ್ನೇ ಪ್ರಮಾಣವಾಗಿ ಉಳ್ಳ ಈ ವಾದವನ್ನು 'ವಿಚಾರವಾದ' (Rationalism) ಎಂದು ಕರೆಯಬಹುದು.

ಇನ್ನೊಂದು ವಾದ ಇದಕ್ಕಿಂತ ಸ್ವಲ್ಪ ಮುಂದೆ ಹೋಗುತ್ತದೆ. ಬುದ್ಧಿಯೊಂದರಿಂದಲೇ ಸತ್ಯದ ಸಮಗ್ರ ಸ್ವರೂಪವನ್ನು ಅರಿಯುವುದು ಸಾಧ್ಯವಿಲ್ಲ. ಪ್ರಯೋಗ ಪರೀಕ್ಷೆಗಳಿಂದ

ಉಂಟಾದ ಅನುಭವದಿಂದ ಮಾತ್ರ ಪೂರ್ಣಜ್ಞಾನವನ್ನು ಪಡೆಯು ವುದು ಸಾಧ್ಯ. ಆದುದರಿಂದ ಅನುಭವವೇ ಜ್ಞಾನಕ್ಕೆ ಮೂಲ ಎಂಬುದು ಈ ವಾದದ ಮುಖ್ಯಾಂಶ. ಇದನ್ನು 'ಅನುಭವೈಕ ವಾದ' (Empiricism) ಎಂದು ಕರೆಯಬಹುದು. ಇದೂ ಬುದ್ಧಿಯನ್ನೇ ಪ್ರಧಾನವಾಗಿಟ್ಟುಕೊಂಡರೂ ಪ್ರಯೋಗಜನ್ಯ ಅನುಭವಗಳಿಗೆ ಅದಕ್ಕಿಂತ ಹೆಚ್ಚಿನ ಸ್ಥಾನವನ್ನು ಕೊಡುತ್ತದೆ.

ಇವೆರಡೂ ಒಂದು ಮಟ್ಟದವರೆಗೆ ಜ್ಞಾನವನ್ನು ಪಡೆಯಲು ಸಹಾಯಕವಾಗುತ್ತವೆಯೇ ಹೊರತು ಪರಿಪೂರ್ಣಜ್ಞಾನವನ್ನು ಕೈಗೂಡಿಸಿಕೊಡಲು ಇವು ಅಸಮರ್ಥವಾಗುತ್ತವೆ—ಎಂಬುದು ಇನ್ನೊಂದು ವಾದ. ಕೇವಲ ಬುದ್ಧಿಶಕ್ತಿಯಿಂದ ಅಥವಾ ಪ್ರಯೋಗ ಪರೀಕ್ಷೆಗಳಿಂದ ಸತ್ಯದ ಪೂರ್ಣಸ್ವರೂಪವನ್ನು ಕಂಡು ಕೊಳ್ಳುವುದು ಸಾಧ್ಯವಿಲ್ಲ. ಎಲ್ಲಿಯೋ ಒಂದು ಕಡೆ ಬುದ್ಧಿ ಮುಂಗಾಣದೆ ದಿಗ್ಭ್ರಮೆಗೊಂಡು ನಿಲ್ಲಬೇಕಾಗುತ್ತದೆ. ಬಾಹ್ಯ ಪ್ರಯೋಗ ಪರೀಕ್ಷೆಗಳಿಂದ ಉಂಟಾದ ಅನುಭವ ತತ್ತರಿಸಬೇಕಾಗು ತ್ತದೆ. ವಿಶ್ವವನ್ನೆಲ್ಲಾ ವ್ಯಾಪಿಸಿದ್ದರೂ ವಿಶ್ವಾತೀತವಾದ ಆ ಸತ್ಯ, ಬುದ್ಧಿಗೆ ತರ್ಕಕ್ಕೆ ಪ್ರಯೋಗ ಪರೀಕ್ಷೆಗಳಿಗೆ ಅತೀತವಾದದ್ದು. ಅದನ್ನು ಕಂಡುಕೊಳ್ಳುವುದಕ್ಕೆ, ಇವುಗಳಿಗೆ ಅತೀತವಾದ ದೃಷ್ಟಿಯೇ ಬೇಕು. ಅಂದರೆ ಸತ್ಯಸ್ವರೂಪವನ್ನರಸುವ ಸಾಧಕನ ದೃಷ್ಟಿ ಅಂತರ್ಮುಖವಾಗಬೇಕು. ಅವನ ಒಳಗಣ್ಣು ತೆರೆಯ ಬೇಕು. ಆಗ ಅದುವರೆಗೆ ಅಗೋಚರವಾದ ಒಂದು ಹೊಸ ಪ್ರಪಂಚ ಗೋಚರಿಸುತ್ತದೆ. ಕೇವಲ ಬುದ್ಧಿ, ಪ್ರಯೋಗ ಪರೀಕ್ಷೆಗಳ ಹಿಡಿತಕ್ಕೆ ನಿಲುಕದ 'ಭಾವ'ವೊಂದು ಹೃದಯವನ್ನು ಜಾಗ್ರತಗೊಳಿಸುತ್ತದೆ. ಜೀವನದ ಗಂಭೀರತರವಾದ ಸಮಸ್ಯೆ ಗಳಿಗೆ ಹೃದಯದಲ್ಲಿ ಮಿಡಿಯುವ ಈ ಭಾವವೇ ನಿಜವಾದ

ಉತ್ತರವನ್ನುಕೊಡಬಲ್ಲದೆಂಬುದನ್ನು ಕಂಡುಕೊಳ್ಳುತ್ತಾನೆ. ಇದನ್ನೇ ಅನುಭಾವ ಎಂದು ಕರೆಯಬಹುದು.

ಹೃದಯದಲ್ಲಿ ಎಚ್ಚರಗೊಳ್ಳುವ ಈ ಭಾವದ ಅನುಸಂಧಾನವೇ ಅನುಭಾವ. ಈ 'ಅನುಭಾವ' ಎಂಬ ಮಾತು ಶರಣರು ಆಧ್ಯಾತ್ಮಿಕ ಪ್ರಪಂಚಕ್ಕೆ ಕೊಟ್ಟ ಕಾಣಿಕೆ. ತಮ್ಮ ಅರಿವಿನಿಂದ ಮತ್ತು ಅದರ ಆಚರಣೆಯಿಂದ ಪಡೆದ ಅನುಭವವನ್ನು ಶರಣರು ತಮ್ಮದೇ ಆದ ವಿಶಿಷ್ಟವಾದ ಮಾತಿನಲ್ಲಿ 'ಅನುಭಾವ' ಎಂದು ಕರೆದರು. ಇದು 'ಬ್ರಹ್ಮಸಾಕ್ಷಾತ್ಕಾರ', 'ಬ್ರಹ್ಮಾನುಭೂತಿ' (Mysticism) ಈ ಮಾತುಗಳ ಅರ್ಥವನ್ನು ಒಳಗೊಂಡಿದ್ದರೂ ಶರಣರ ಜೀವನದಿಂದ ಮತ್ತು ಸಾಧನೆಯಿಂದ ಅವುಗಳಲ್ಲಿ ಇಲ್ಲದ ಅರ್ಥ ಇದರಲ್ಲಿ ಗೋಚರಿಸುತ್ತದೆ. ಆದರೂ ಅದನ್ನು ಒಂದು ಅರ್ಥದಲ್ಲಿ 'Mysticism' ಎಂಬುದಕ್ಕೆ ಸಂವಾದಿಯಾಗಿಟ್ಟುಕೊಂಡು, ಆ ಮಾತಿನ ವ್ಯಾಪ್ತಿಯನ್ನು ಪರಿಶೀಲಿಸಬಹುದಾಗಿದೆ.

ಈ ಅನುಭಾವದ ಸಂಪೂರ್ಣ ಅರ್ಥವನ್ನು ಸೂತ್ರರೂಪವಾಗಿ ಹಿಡಿದಿಡುವುದು ಅಸಾಧ್ಯವಾದರೂ, ಅದರ ಪ್ರಮುಖವಾದ ಅಂಶಗಳನ್ನು ಸೂತ್ರರೂಪವಾಗಿ ಹೇಳಲು ಅನೇಕರು ಪ್ರಯತ್ನಿಸಿದ್ದಾರೆ. ಉದಾಹರಣೆಗೆ ಒಂದೆರಡನ್ನು ನೋಡಬಹುದು:—

"Mysticism is the immediate feeling of the unity of the self with God. It is nothing, therefore, but the fundamental feeling of religion, religious life at its very heart and centre."

"Mysticism is religion in it most concentrated and exclusive form. It is that attitude of the

mind in which all other relations are swallowed up in the relation of the soul with the God."

[*Mysticism in Religion–by W. R. Inge*]

"Mysticism denotes that attitude of mind which involves a direct, immediate, first hand, intuitive apprehension of God."

[*Mysticism in Maharastra–by R. D. Ranade*]

ಈ ಸೂತ್ರಗಳನ್ನು ನೋಡಿದಾಗ ಅನುಭಾವ ಮೂರು ಮುಖ್ಯ ಅಂಶಗಳನ್ನು ಒಳಗೊಂಡಿರುವುದು ಕಾಣುತ್ತದೆ. "God", "Soul" ಮತ್ತು "Relation of the soul to the God" ಅಂದರೆ "ಪರಮಾತ್ಮ", "ಜೀವಾತ್ಮ" ಮತ್ತು ಇವುಗಳ ಸಂಬಂಧದಿಂದ ಉಂಟಾಗುವ "ಅಮೃತತ್ವ"—ಇವು ಅನುಭಾವದ ಮೂಲಭೂತವಾದ ತಳಹದಿ. ಪರಮಾತ್ಮನೊಡನೆ ಸಮರಸಗೊಂಡು ಅಮೃತತ್ವವನ್ನು ಪಡೆಯಬೇಕೆಂಬ ಜೀವಾತ್ಮದ ನಿರಂತರ ಹಂಬಲವನ್ನು ಕೈಗೂಡಿಸಿಕೊಡುವ ಸಾಧನೆಯೇ ಅನುಭಾವ ಮಾರ್ಗ.

ಅಂದರೆ, ದೇಹದ ಸುಪ್ತಶಕ್ತಿಗಳನ್ನು ಎಚ್ಚರಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದನ್ನು 'ಅನುಭಾವ' ಎಂದು ಹೇಳಬಹುದು. ಇದು ಕೇವಲ ಬುದ್ಧಿ ಮನಗಳಿಗೆ ನಿಲುಕದೆ ಅಂಥವುಗಳನ್ನು ದಾಟಿದ "ಒಳ ಅರಿವು" ಅಥವಾ "ಅಂತರ್ ದೃಷ್ಟಿ"ಯಿಂದ ಅನುಭೂತವಾಗುತ್ತದೆ. ಈ ಅಂತರ್‌ದೃಷ್ಟಿಯನ್ನು ನಿರ್ದೇಶಿಸಲು ಕೆಲವು ವೇಳೆ ಆಂಗ್ಲಭಾಷೆಯಲ್ಲಿ "Intuition" ಎಂಬ ಪದವನ್ನು ಪ್ರಯೋಗಿಸುತ್ತಾರೆ. ಡಾ॥ ಎಸ್. ರಾಧಾಕೃಷ್ಣನ್ ಅವರು ಹೇಳುವಂತೆ "Intuition is the extension of

perception to regions beyond sense"—ಅಂದರೆ ಇಂದ್ರಿಯದರ್ಶಿತ ಲೋಕಗಳಾಚೆಗೆ ವ್ಯಾಪಿಸುವ ಕಾಣ್ಕೆ.

ಜೀವನದ ಗುರಿಯನ್ನು ಕುರಿತು ಮನುಷ್ಯ ಆಲೋಚಿಸಲು ತೊಡಗಿದಂದಿನಿಂದಲೇ ಈ ಮಾರ್ಗದ ಅನ್ವೇಷಣೆ ಪ್ರಾರಂಭ ವಾಯಿತೆಂದು ಹೇಳಬಹುದು. ಸಾಧಕರ ನಿರಂತರ ಸಾಧನೆ ಯಿಂದ ಆ ಮಾರ್ಗ, ಪೂರ್ಣತೆಯನ್ನು ಪಡೆಯಿತು. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಆ ಸಾಧಕರು ಜೀವನದ ರಹಸ್ಯವನ್ನು ಅರಿಯಲು ಪ್ರಯತ್ನವನ್ನು ಕೈಗೊಂಡಿದ್ದರೂ ಸಹ ಎಲ್ಲರೂ ಒಂದೇ ಗುರಿಯ ಕಡೆಗೆ ನಡೆದಿದ್ದಾರೆ. ಅವರ ಹೋರಾಟದ ಸ್ವರೂಪ ಹೊರನೋಟಕ್ಕೆ ಬೇರೆ ಬೇರೆ ರೀತಿ ಯದು. ಆದರೆ ಕೊನೆಯ ಗುರಿಯನ್ನು ಕಂಡುಕೊಂಡವರೆಲ್ಲರೂ ಒಂದೇ ರೀತಿಯ ಅನುಭವವನ್ನು ಪಡೆದಿರುವುದು ಕಂಡುಬರು ತ್ತದೆ. ಮಾರ್ಗಗಳು ಬೇರೆ ಬೇರೆಯಿದ್ದಂತೆ ತೋರಿದರೂ ಒಂದೇ ಸಮುದ್ರದ ಕಡೆಗೆ ಸಾಧಕನನ್ನು ನಡೆಸಿಕೊಂಡು ಹೋಗಿವೆ. ಬೇರೆ ಬೇರೆ ಕಣಿವೆಗಳಿಂದ ಅವರು ಬಂದರೂ ಏರಿರುವ ಶಿಖರ ಮಾತ್ರ ಒಂದೇ; ಪಡೆದ ದೈವಶಕ್ತಿಯ ದರ್ಶನ ಮಾತ್ರ ಒಂದೇ. ಆದುದರಿಂದಲೇ ಜಗತ್ತಿನ ಅನುಭಾವಿಗಳೆಲ್ಲರ ಮಾತಿನಲ್ಲಿ ಒಂದೇ ಸತ್ಯದ ಸೂತ್ರವನ್ನು ಕಾಣುತ್ತೇವೆ.

ಭರತಖಂಡವನ್ನೇ ತೆಗೆದುಕೊಂಡರೆ ಉಪನಿಷತ್ತುಗಳು ಎಲ್ಲ ದೃಷ್ಟಿಯಿಂದಲೂ ಅನುಭಾವದ ಮೊಟ್ಟಮೊದಲನೆಯ ಗ್ರಂಥ ಗಳೆಂದು ಹೇಳಬಹುದು. ಯಜ್ಞ ಯಾಗಾದಿಗಳಿಂದ ಲಭಿಸುವ ಫಲ ಅತ್ಯಲ್ಪವಾದುದೆಂದೂ, ಕ್ಷಣಭಂಗುರವಾದುದೆಂದೂ, ಶಾಶ್ವತವಾದ ಅಪಾರವಾದ ಸುಖಸಾಧನೆಗೆ ಜ್ಞಾನಯಜ್ಞ ವೊಂದೇ ಸಾಧನವೆಂದೂ ಉಪನಿಷತ್ತುಗಳು ಸಾರಿದುವು.

ಮನಸ್ಸಿನ ಶಕ್ತಿಯನ್ನೂ, ಮನಸ್ಸಿನ ಮೇಲೆ ಪ್ರಭುತ್ವವನ್ನೂ ಪಡೆಯುವುದರಿಂದ ಉಂಟಾಗುವ ಅದ್ಭುತ ಪರಿವರ್ತನೆಯನ್ನೂ ಮೊಟ್ಟಮೊದಲನೆಯ ಬಾರಿಗೆ ಉಪನಿಷತ್ತಿನ ಋಷಿಗಳು ಕಂಡು ಕೊಂಡರು. ಮನುಷ್ಯ ದೀನನಾಗಿ ಕುರುಡು ನಂಬಿಕೆಯಿಂದ ಆ ಶಕ್ತಿಯನ್ನು ಆಶ್ರಯಿಸಬೇಕಾಗಿಲ್ಲ. ಆ ಶಕ್ತಿಯ ಪ್ರತ್ಯಕ್ಷ ದರ್ಶನವನ್ನು ಸಾಕ್ಷಾತ್ತಾಗಿ ಪಡೆಯಬಹುದು; ಪಡೆಯಬೇಕು. ಏಕೆಂದರೆ, ಎಲ್ಲರೂ ಆ ಅಮೃತಶಕ್ತಿಯ ಪುತ್ರರು (ಅಮೃತಸ ಪುತ್ರಾಃ) ಎಂದು ಉಪನಿಷತ್ತು ಘೋಷಿಸುತ್ತದೆ.

ಉಪನಿಷತ್ತಿನಲ್ಲಿ ಋಷಿಗಳ ಮನಸ್ಸು ಅಂತರ್ಮುಖವಾಗಿ ಸತ್ಯಶೋಧನೆಯಲ್ಲಿ ತೊಡಗಿತು. ನಮ್ಮ ದೇಹದಲ್ಲಿರುವ ಪ್ರತಿ ಯೊಂದು ಚಲನವಲನಕ್ಕೂ ಯಾವುದೋ ಒಂದು ಅಗೋಚರ ಚೈತನ್ಯಶಕ್ತಿ ಕಾರಣವಾಗಿರಬೇಕು. ಬಹುರೂಪವಾದ ಈ ಸೃಷ್ಟಿ ಯನ್ನೆಲ್ಲಾ ನಿರ್ಮಿಸಿ ನಡೆಸುತ್ತಿರುವ ಆ ಶಕ್ತಿ ಯಾವುದು? ಹೀಗೆ ಅವರ ಮನಸ್ಸು ಮೂಲಭೂತವಾದ ಸಮಸ್ಯೆಗಳ ವಿವೇಚನೆಯಲ್ಲಿ ತೊಡಗಿತು. ಅಂತರ್ಮುಖವಾದ ತಮ್ಮ ಸಾಧನೆಯಲ್ಲಿ ಮುಂದು ವರಿದು:

ಅಣೋರಣೀಯಾನ್ ಮಹತೋ ಮಹೀಯಾನ್।
ಆತ್ಮಸ್ಯ ಜಂತೋರ್ನಿಹಿತೋ ಗುಹಾಯಾಂ॥

ಅಂದರೆ 'ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹ ತ್ತಾದ ಆತ್ಮವು ಪ್ರಾಣಿಗಳ ಹೃದಯ ಗುಹೆಯಲ್ಲಿದೆ', ಎಂಬು ದನ್ನೂ, ಮತ್ತು ಈ ಆತ್ಮನಲ್ಲಿಯೇ ಸರ್ವಭೂತಾಂತರಾತ್ಮನಾದ ಪರಮಾತ್ಮನನ್ನು ಕಾಣಬೇಕೆಂಬುದನ್ನೂ ಕಂಡುಕೊಂಡರು. ಸರ್ವ ಭೂತಗಳ ಅಂತರ್ಯದಲ್ಲಿರುವ ಚೈತನ್ಯಶಕ್ತಿ ಒಂದೇ. ಅದೇ ನಾನಾ ರೂಪಗಳನ್ನು ಧರಿಸಿ ಎಲ್ಲೆಲ್ಲೂ ವ್ಯಾಪಿಸಿದೆ. ಆ ಶಕ್ತಿಯನ್ನು

ಸಾಕ್ಷಾತ್ಕರಿಸಿಕೊಂಡಾಗಲೇ ಅಕ್ಷಯಸುಖ ದೊರೆಯುವುದು. ಈ ಪ್ರತ್ಯಕ್ಷ ಸಾಕ್ಷಾತ್ಕಾರವೇ ಜೀವನದ ಕೊನೆಯ ಗುರಿ ಎಂದು ಒತ್ತಿ ಹೇಳಿದರು.

ಈ ಕೊನೆಯ ಗುರಿಯನ್ನು ಸಾಧಿಸುವುದು ಹೇಗೆ? ಶರೀರಗಳಲ್ಲಿ ಅಶರೀರನಾಗಿ, ಅನಿತ್ಯಗಳಲ್ಲಿ ನಿತ್ಯನಾಗಿ, ಸರ್ವವ್ಯಾಪಿಯಾಗಿರುವ ಈ ಆತ್ಮನ ಸಾಕ್ಷಾತ್ಕಾರ—ಎಂತು? "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುಧಾ ಶ್ರುತೇನ" ಎಂದು ಎಚ್ಚರಿಸಿದರು. ಅಂದರೆ, ಆತ್ಮನು ಕೇವಲ ಪ್ರವಚನದಿಂದ, ಮೇಧಾಶಕ್ತಿಯಿಂದ, ಬಹಳ ಶ್ರವಣದಿಂದ ಲಭ್ಯನಲ್ಲ. ಇವೆಲ್ಲವುಗಳನ್ನು ದಾಟಿ ಮುಂದೆ ನಡೆಯಬೇಕು. ಇವೆಲ್ಲವುಗಳಿಗೆ ಅತೀತವಾದ ಆ ಒಳಗಣ್ಣು ಪರಮಾತ್ಮನ ಕರುಣೆಯಿಂದಲೇ ತೆರೆಯುತ್ತದೆ. ಆಗ ಆತ್ಮನ ನಿಜಸ್ವರೂಪ ಪ್ರಕಟವಾಗುತ್ತದೆ. ಹೀಗೆ ಆತ್ಮನ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣಲು ಋಷಿಗಳು ಕಾತರಗೊಂಡರು.

> ಹಿರಣ್ಮಯೇನ ಪಾತ್ರೇಣ, ಸತ್ಯಸ್ಯಾಪಿ ಹಿತಂ ಮುಖಂ।
> ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ॥

ಎಂದು ಹಂಬಲಿಸಿದರು. "ಸತ್ಯದ ಮುಖ ಚಿನ್ನದ ಮುಚ್ಚಳದಿಂದ ಮುಚ್ಚಿದೆ. ಆ ಮುಚ್ಚಳದ ಸೌಂದರ್ಯವೆಷ್ಟೇ ಇದ್ದರೂ ಅದಕ್ಕೆ ಮರುಳಾಗಿ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುವುದನ್ನು ಮರೆಯಲಾರೆವು. ಓ! ಜ್ಞಾನಸೂರ್ಯನೇ ಚಿನ್ನದ ಮುಚ್ಚಳವನ್ನು ತೆರೆದು ಸತ್ಯದ ಪ್ರತ್ಯಕ್ಷ ದರ್ಶನವನ್ನು ಮಾಡಿಸು" ಎಂದು ಬೇಡಿಕೊಳ್ಳುತ್ತಾರೆ. ಅನುಭಾವಿಯ ದೃಷ್ಟಿಯೇನೆಂಬುದನ್ನು ಇಲ್ಲಿ ಬಹಳ ಸುಂದರವಾಗಿ ಋಷಿಗಳು ಸೂಚಿಸಿದ್ದಾರೆ ಚಿನ್ನದ ಮುಚ್ಚಳವನ್ನು ತೆಗೆದು ಸತ್ಯದ ಪ್ರತ್ಯಕ್ಷ ದರ್ಶನವನ್ನು ಪಡೆಯುವುದೇ ಅನುಭಾವ.

ಉಪನಿಷತ್ತುಗಳನಂತರ ಅವುಗಳ ಸಾರವನ್ನು ಒಳಗೊಂಡ ಭಗವದ್ಗೀತೆ ಅನುಭಾವದ ದೃಷ್ಟಿಯಿಂದ ಅತಿಮುಖ್ಯವಾದ ಗ್ರಂಥ. ಜೀವನದ ಹೋರಾಟದಲ್ಲಿ ತೊಡಗಿದ್ದರೂ ಆ ಬಂಧನಕ್ಕೆ ಅಂಟದೆ ಆತ್ಮನಿಂದ ಆತ್ಮನಲ್ಲಿಯೇ ಸಂತುಷ್ಟನಾಗುವ ಸ್ಥಿತಪ್ರಜ್ಞನ ಬ್ರಾಹ್ಮೀಸ್ಥಿತಿಯನ್ನು ಇದು ವರ್ಣಿಸುತ್ತದೆ. ಮತ್ತು ಆ ನಿಲವನ್ನು ಸಾಧಿಸಲು ಬೇಕಾದ ಯೋಗ ಸಮನ್ವಯದ ಮಾರ್ಗವನ್ನು ನಿರೂಪಿಸುತ್ತದೆ.

ತತ್ತ್ವಜಿಜ್ಞಾಸೆ ಸಾರ್ಥಕವಾಗಬೇಕಾದರೆ ಅದು ಬುದ್ಧಿಯನ್ನು ಮಾತ್ರ ತೃಪ್ತಿಪಡಿಸುವ ಜಿಜ್ಞಾಸೆಯಾಗಿ ಉಳಿದರೆ ಸಾಲದು. ಹೃದಯವನ್ನು ಅರಳಿಸುವ ಅನುಭಾವವಾಗಬೇಕು ಎಂಬ ತತ್ತ್ವವನ್ನು ಪ್ರತಿಪಾದಿಸುತ್ತದೆ ಗೀತೆ. ಕೃಷ್ಣನ ಉಪದೇಶವೆಲ್ಲಾ ಸಾರ್ಥಕವಾಗಿ ಅರ್ಜುನ ಕಾರ್ಯೋನ್ಮುಖನಾಗಬೇಕಾದರೆ ಅವನಿಗೆ ದಿವ್ಯದೃಷ್ಟಿಯನ್ನು ಕೊಡಬೇಕಾಯಿತು. ದಿವ್ಯದೃಷ್ಟಿಯಿಂದ ಅರ್ಜುನ ವಿಶ್ವರೂಪವನ್ನು ಕಂಡುಕೊಳ್ಳುತ್ತಾನೆ. ಈ ದಿವ್ಯದೃಷ್ಟಿಯೇ ಅನುಭಾವಿಗೆ ಬೇಕಾದ ಒಳಗಣ್ಣು. ಸತ್ಯಸ್ವರೂಪ ಸಾಕ್ಷಾತ್ಕಾರವೇ ವಿಶ್ವರೂಪ ದರ್ಶನ. ಸತ್ಯದ ಸಾಕ್ಷಾತ್ಕಾರಕ್ಕೆ ಒಳಗಣ್ಣು ತೆರೆಯಬೇಕೆಂಬುದನ್ನು ಗೀತೆ ಹೀಗೆ 'ಪ್ರತಿಮಾ' ರೂಪದಿಂದ ಪ್ರತಿಪಾದಿಸುತ್ತದೆಂದು ಹೇಳಬಹುದು.

ಉಪನಿಷತ್ತುಗಳ ಆದರ್ಶವೇ ಮುಂದೆ ಶಾಖೋಪಶಾಖೆಗಳಾಗಿ ಬೆಳೆಯಿತು. ಆಗಮಗಳಲ್ಲಿ ,ಪುರಾಣಗಳಲ್ಲಿ, ಇತಿಹಾಸ ಮಹಾಕಾವ್ಯಗಳಲ್ಲಿ, ಅದರ ಒಂದೊಂದು ರೂಪವನ್ನು ಗುರುತಿಸಬಹುದು. ಭರತಖಂಡದ ವಿವಿಧ ಭಾಗಗಳಲ್ಲಿ ಕಾಲಕಾಲಕ್ಕೆ ಆಗಿಹೋದ ಸಾಧಕರುಗಳ ಜೀವನದಲ್ಲಿಯೂ ಮತ್ತು ಅವರು ವಿವಿಧ ಭಾಷೆಗಳಲ್ಲಿ ಹಾಡಿದ ಸಾಹಿತ್ಯದಲ್ಲಿಯೂ ಇದೇ ಆದರ್ಶದ ಪುನರಾವರ್ತನವನ್ನು ಕಾಣುತ್ತೇವೆ.

ಅನುಭಾವದ ದೃಷ್ಟಿಯಿಂದ ನೋಡುವುದಾದರೆ ಕನ್ನಡ ಸಾಹಿತ್ಯದಲ್ಲಿ ಜೈನಧರ್ಮ ದೃಷ್ಟಿಯೊಂದಲ್ಲದೆ ಇನ್ನೆರಡು ಪ್ರಮುಖವಾದ ಘಟ್ಟಗಳಿವೆ. ಮುಖ್ಯವಾಗಿ ೧೨ನೇ ಶತಮಾನದಲ್ಲಿ ಸೃಷ್ಟಿಯಾದ ಶರಣ ಸಾಹಿತ್ಯ ಮತ್ತು ೧೫ನೇ ಶತಮಾನದಲ್ಲಿ ದಾಸರು ಹಾಡಿದ ದಾಸ ಸಾಹಿತ್ಯ. ಇದಲ್ಲದೆ ಬಹುಶಃ ನಿಜಗುಣ ಶಿವಯೋಗಿಗಳಿಂದ ಪ್ರಾರಂಭವಾದ 'ತತ್ತ್ವಸಾಹಿತ್ಯ' ಸಮೃದ್ಧವಾಗಿ ಬೆಳೆದುಕೊಂಡುಬಂದಿದೆ; ಅನುಭಾವ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ.

## ೨. ಶರಣರ ಅನುಭಾವ ಸಾಹಿತ್ಯ

'ಸಾಹಿತ್ಯ'ವೇ ಬೇರೆ, 'ಅನುಭಾವ'ವೇ ಬೇರೆ; ಈ ಎರಡರ ಗುರಿ ಲಕ್ಷಣ ಮಾರ್ಗಗಳೂ ಬೇರೆ ಬೇರೆಯಾದವುಗಳು ಎಂದು ಹೇಳುವವರಿದ್ದಾರೆ. ಸಾಹಿತ್ಯವನ್ನು ಕೇವಲ ಸಾಹಿತ್ಯದ ದೃಷ್ಟಿಯಿಂದ ಮಾತ್ರ ನೋಡಿದಾಗ ಹೀಗೆ ಅನಿಸಿದರೂ ವಾಸ್ತವವಾಗಿ ಸಾಹಿತ್ಯ ತನ್ನ ಸಾರ್ಥಕತೆಯನ್ನು ಪಡೆಯುವುದು ಅನುಭಾವದ ಅವತರಣದಿಂದಲೇ ಅಥವಾ ಅನುಭಾವದ ಕಡೆಗೆ ವಿಕಾಸಗೊಂಡಾಗಲೇ: "The greatness of literature cannot be determined solely be literary standards; though we must remember that whether it is literature or not can be determined only by literary standards." ಎಂದು ಪ್ರಸಿದ್ಧ ಆಂಗ್ಲ ಕವಿ ಮತ್ತು ವಿಮರ್ಶಕ ಟಿ. ಎಸ್. ಎಲಿಯಟ್ ಹೇಳುವ ಮಾತನ್ನು ಇಲ್ಲಿ ಗಮನಿಸಬಹುದು. ಒಂದು ಕೃತಿ ಸಾಹಿತ್ಯವೇ ಅಲ್ಲವೇ ಎಂಬು

ದನ್ನು ಸಾಹಿತ್ಯ–ಲಕ್ಷಣದ ಅಳತೆಗೋಲಿನಿಂದ ನಿರ್ಧರಿಸಬೇಕು. ಆದರೆ ಆ ಕೃತಿಯ ಹಿರಿಮೆಯನ್ನು ಕೇವಲ ಸಾಹಿತ್ಯಮಟ್ಟದಿಂದ ಅಳೆಯುವುದು ಸಾಧ್ಯವಿಲ್ಲ ಎನ್ನುತ್ತಾನೆ. ಅಂದರೆ ಸಾಹಿತ್ಯವು ಮಹತ್ವವನ್ನು ಪಡೆಯುವುದಕ್ಕೆ ಅದು ಕೇವಲ ಸಾಹಿತ್ಯವಾಗಿದ್ದರೆ ಸಾಲದು. ಅದಕ್ಕೇ ಮೀರಿದ ಒಂದು ಜೀವನ ದರ್ಶನವನ್ನು ಒಳಗೊಂಡಿರಬೇಕು ಎಂದು ಸೂಚಿಸುತ್ತಾನೆ.

ಈ ಅರ್ಥದಲ್ಲಿಯೇ ನಮ್ಮವರು ಕವಿಗಳನ್ನು ದ್ರಷ್ಟಾರರು ಎಂದು ಕರೆದರು. "ನಾನೃಷಿಃ ಕುರುತೇ ಕಾವ್ಯಂ" ಎಂದು ಹೇಳಿದರು. ಇದೇ ಮಾತನ್ನು ಅರವಿಂದರು, "The greatest poetry gives expresssion to the realisation of the Divine in the world and in man" ಎಂದಿದ್ದಾರೆ. ಈ ಸೃಷ್ಟಿಯಲ್ಲಿ ಮತ್ತು ಮಾನವನಲ್ಲಿ ಇರುವ ದೈವತ್ವದ ಸಾಕ್ಷಾತ್ಕಾರಕ್ಕೆ ವ್ಯಕ್ತಸ್ವರೂಪವನ್ನು ಕೊಡುವುದೇ ಸತ್ವಯುತವಾದ ಕಾವ್ಯವೆನ್ನುವುದು ಅವರ ಅಭಿಪ್ರಾಯ. ಕಾವ್ಯವನ್ನು ಕುರಿತು ಸೂತ್ರೀಕರಿಸುತ್ತಾ ಅವರು ಹೇಳುತ್ತಾರೆ: ಕಾವ್ಯವೆನ್ನುವುದು "Rhythmic speech which rises at once from the heart of the seer and from the distant home of truth" ಎಂದು. ಈ ಮಾತುಗಳಲ್ಲಿ ಕಾವ್ಯದ ಉಗಮ ಮತ್ತು ಉದ್ದೇಶಗಳೆರಡನ್ನೂ ವ್ಯಕ್ತಪಡಿಸಿದ್ದಾರೆ.

ಹೀಗೆ ಸಾಹಿತ್ಯವು ಸಾರ್ಥಕವಾಗುವುದು ಅನುಭಾವದ ಅಭೀಪ್ಸೆಯಿಂದ ಉದ್ದೀಪನಗೊಂಡಾಗ, ಮತ್ತು ಆ ಅನುಭಾವದ ಬೆಳಕನ್ನು ಪಡೆಯುವುದರಲ್ಲಿ ಪರ್ಯವಸಾನಗೊಂಡಾಗ. ಆದರೆ ಇದಕ್ಕಾಗಿ ಸಾಹಿತಿ ಅನುಸರಿಸುವ ಮಾರ್ಗ ತನ್ನದೇ ಆದ ಮಾರ್ಗ, ಅದು ಸಾಹಿತ್ಯದ ಮಾರ್ಗ. ವಿಜ್ಞಾನಿ ತತ್ವಜ್ಞಾನಿ

ಗಳಂತೆ ವಿಭಜನೆ ಮತ್ತು ಜಿಜ್ಞಾಸೆಗಳ ಮಾರ್ಗವಲ್ಲ. ಅದು ಸೌಂದರ್ಯಾನುಭವದ ರಸದೃಷ್ಟಿಯಿಂದ ನಿರ್ಮಿಸುವ ಸೃಷ್ಟಿ.

ಸೌಂದರ್ಯವನ್ನು ಕಂಡಾಗ ಸಾಹಿತಿಯ ಹೃದಯ ಮಿಡಿಯುತ್ತದೆ. ಜಗತ್ತಿನ ವಿವಿಧ ಘಟನೆಗಳಿಂದ ಅನುಕಂಪಗೊಳ್ಳುತ್ತದೆ. ಆ ಸನ್ನಿವೇಶಗಳಲ್ಲಿ ತಲ್ಲೀನವಾಗಿ 'ತಾನೇ ಅದು ಆಗಿ' ಅನುಭವಿಸಿ ಅಭಿವ್ಯಕ್ತಗೊಳಿಸುತ್ತದೆ. ಈ ಅನುಭವವೇ ರಸಾನುಭವ, ಅಭಿವ್ಯಕ್ತಿಯೇ ಸಾಹಿತ್ಯ. "ತಾನೇ ಅದು ಆಗಿ ಅನುಭವಿಸುವ" ವಿಶಿಷ್ಟ ಶಕ್ತಿಯೇ ಅನುಭಾವಿಗೂ ಸಾಹಿತಿಗೂ ಇರುವ ಸಮಾನ ಧರ್ಮ. ಆದರೆ ಆ 'ಅದು' ಯಾವುದು ಎಂಬುದರ ಮೇಲೆ 'ರಸಾನುಭವ' ಅಥವಾ 'ಅನುಭಾವ' ಸಿದ್ಧವಾಗುತ್ತದೆ. ಈ ಬಾಹ್ಯಸೌಂದರ್ಯದ ಹಿಂದಿರುವ ಚಿರಂತನ ಸೌಂದರ್ಯವನ್ನು, ಈ ಜೀವನದ ಆಚೆಗಿನ ನಿರಂತರ ಎಚ್ಚರದ ಬೆಳಗನ್ನು ಎಲ್ಲೆಲ್ಲಿಯೂ ಕಂಡುಕೊಂಡು, ಅದರ ಕಂಪನಕ್ಕೆ ಅನುಗುಣವಾಗಿ ತನ್ನ ಹೃದಯದ ವೀಣೆಯನ್ನು ಮಿಡಿದಾಗ ಅದು ನಿಜವಾದ ಅರ್ಥದಲ್ಲಿ ಅನುಭಾವವಾಗುತ್ತದೆ. ಆ ನಿಲವಿನಲ್ಲಿ ಹೊರಹೊಮ್ಮಿದ ಹೃದಯಗೀತೆ, ಅನುಭಾವ ಸಾಹಿತ್ಯವಾಗಿ ಪರಿಣಮಿಸುತ್ತದೆ. ಶರಣರ ವಚನ ಸಾಹಿತ್ಯ ಈ ಅರ್ಥದಲ್ಲಿ ಅನುಭಾವ ಸಾಹಿತ್ಯ.

ಒಂದು ಅರ್ಥದಲ್ಲಿ ಅನುಭಾವ ಸಾಹಿತ್ಯವೆಂದರೆ ಅನುಭಾವವನ್ನು ಕುರಿತು ಬರೆದ ಎಲ್ಲ ಗ್ರಂಥಗಳ ಸಮುದಾಯವೆಂದೂ ಆಗಬಹುದು, ವೈಜ್ಞಾನಿಕ ಸಾಹಿತ್ಯ, ರಾಜಕೀಯ ಸಾಹಿತ್ಯ, ಧಾರ್ಮಿಕ ಸಾಹಿತ್ಯ—ಎಂದು ಮುಂತಾಗಿ ಹೇಳುವಂತೆ. ಆದರೆ 'ಸಾಹಿತ್ಯ' ಎಂಬ ಮಾತನ್ನು ಇಷ್ಟು ವಿಶಾಲವಾದ ಅರ್ಥದಲ್ಲಿ ತೆಗೆದುಕೊಳ್ಳದೆ, 'ಭಾವನಿಷ್ಠ'ವಾದ, ಹೃದಯಂಗಮವಾದ ಬರವಣಿಗೆ ಎಂದು ಮಾತ್ರ ತೆಗೆದುಕೊಂಡಾಗ ಅದು "ಕೇವಲ

ಸಾಹಿತ್ಯ "ವಾಗುತ್ತದೆ. ಈ ಭಾವನಿಷ್ಠೆ, ಊರ್ಧ್ವಮುಖವಾಗಿ ಅಲೌಕಿಕ ನಿತ್ಯಸತ್ಯವನ್ನು ತನ್ನ ಪ್ರತಿಭಾದರ್ಶನದಿಂದ ಕಂಡು ಕೊಂಡು ಕೃತಿಯಲ್ಲಿ ಒಡಮೂಡಿಸಿದಾಗ ಅದು "ದಾರ್ಶನಿಕ ಸಾಹಿತ್ಯ" ವಾಗುತ್ತದೆ. ಕೃತಿಯಲ್ಲಿ ಒಡಮೂಡಿದ ದರ್ಶನವನ್ನು ಜೀವನದಲ್ಲಿಯೂ ಅಳವಡಿಸಿಕೊಂಡಾಗ ಆ ಸಾಹಿತಿ ಮಹಾ ವ್ಯಕ್ತಿಯೂ ಆಗಿ ಪರಿಣಮಿಸುತ್ತಾನೆ. ಇದು ಸಾಹಿತ್ಯದ ಮೂಲಕವೇ ಅನುಭಾವವನ್ನು ಸಾಧಿಸುವ ಮಾರ್ಗ.

ಇನ್ನು ಕೆಲವು ಸಾಧಕರು ಧಾರ್ಮಿಕ ಸಾಧನೆಗಳಿಂದ ಅನುಭಾವಮಾರ್ಗದಲ್ಲಿ ನಡೆಯುತ್ತಾರೆ. ಆಯಾ ಧಾರ್ಮಿಕ ಸ್ವರೂಪದ ಹಿನ್ನೆಲೆಗೆ ಅನುಗುಣವಾಗಿ ಅವರು ಕೈಗೊಳ್ಳುವ ಆಚರಣೆಗಳೂ ಸ್ವಲ್ಪಮಟ್ಟಿಗೆ ವಿಭಿನ್ನವಾಗಿ ಕಂಡರೂ, ಕೊನೆಗೆ ಅವರು ಪಡೆಯುವ ಅನುಭಾವದ ಆನಂದವು, ರೂಪದಲ್ಲಿ ಅಲ್ಲ ದಿದ್ದರೂ ಸ್ವರೂಪದಲ್ಲಿ ಒಂದೇ ಆಗಿ ಪರಿಣಮಿಸುತ್ತದೆ. ಆ ಆನಂದದ ನಿಲವು ಅನುಪಮವಾದದ್ದು. ಮಾತು ಮನಗಳಿಗೆ ಮೀರಿದುದು. ನಾರದ ಭಕ್ತಿಸೂತ್ರ ಹೇಳುವಂತೆ: "ಮೂಕಂ ಸ್ವಾದನವತ್" ಮೂಕನು ರುಚಿನೋಡಿದಂತೆ. ಆದರೂ ಅನುಭಾವಿ ತನ್ನ ಆ ಅನುಭವವನ್ನು ಲೋಕಕಲ್ಯಾಣಕ್ಕಾಗಿ ಅಭಿವ್ಯಕ್ತಗೊಳಿಸಲು ಅನುವಾಗುತ್ತಾನೆ. ಆ ಬೆಳಕನ್ನು ಕಾಣಲು ತಾನು ಪಟ್ಟಪಾಡು, ನಡೆದ ಜಾಡು, ಕೊನೆಗೆ ತಾನು ಕಂಡ ಆನಂದ—ಇವುಗಳನ್ನು ಮರ್ತ್ಯ ಭಾಷೆಯಲ್ಲಿ ಹೊರಹೊಮ್ಮಿಸು ತ್ತಾನೆ. ಆ ಅನುಭವಗಳ ಅನಿವಾರ್ಯವಾಹಕವಾಗಿ ಭಾಷೆ ಇಲ್ಲಿ ಅವತರಿಸುತ್ತದೆ.

ಶಿವಶರಣರು ಹಾಡಿದ ವಚನಗಳಲ್ಲಿ ಈ ಮನೋಧರ್ಮ ವನ್ನು ಕಾಣುತ್ತೇವೆ. ಸಾಹಿತ್ಯರಚನೆ ಅವರ ಮುಖ್ಯ ಉದ್ದೇಶ

ವಾಗಿರಲಿಲ್ಲ. ಜೀವನದ ಮಹತ್ತರವಾದ ಗುರಿಯನ್ನು ಪ್ರತ್ಯಕ್ಷ ವಾಗಿ ಸಾಧಿಸುವುದು ಅವರ ಮಹೋದ್ದೇಶವಾಗಿತ್ತು. ಅದನ್ನು ಸಾಧಿಸಿದ ಮಹಾಸಾಹಸ ಮತ್ತು ಆ ಕೊನೆಯ ನಿಲವಿನಲ್ಲಿ ಹಾಡಿದ ಧನ್ಯತೆಯ ಉದ್ಗಾರ ಇವು ವಚನರೂಪವಾಗಿ ಹೊರ ಹೊಮ್ಮಿದುವು. ಲೋಕವನ್ನೇ ಬೆಳಗುವ ಸೂರ್ಯನ ಉದಯ ದಿಂದ ನಮ್ಮ ಮನೆಯ ಕತ್ತಲೂ ಹರಿಯುವಂತೆ, ಈ ಅನುಭಾವ-ಸೂರ್ಯನ ಅವತಾರ, ಕನ್ನಡ ಸಾಹಿತ್ಯವನ್ನೂ ಶ್ರೀಮಂತಗೊಳಿಸಿತು. ವಿಶ್ವಸಾಹಿತ್ಯದ ಮಟ್ಟಕ್ಕೇರಿಸಿತು.

"Literature is fundamentally an expresion of life through medium of language" ಎಂದು ಹಡ್ಸನ್ ಹೇಳುವಂತೆ ಸಾಹಿತ್ಯವೆನ್ನುವುದು ಭಾಷೆಯ ಮೂಲಕ ಹೊರ ಹೊಮ್ಮಿದ ಜೀವನದ ಅಭಿವ್ಯಕ್ತಿ ಎಂದು ಹೇಳುವುದಾದರೆ, ಶರಣ ಸಾಹಿತ್ಯಕ್ಕೆ ಆ ಮಾತು ಅರ್ಥವತ್ತಾಗಿ ಅನ್ವಯಿಸುತ್ತದೆ. ಶರಣರು ಜೀವನವನ್ನು ಪೂರ್ಣದೃಷ್ಟಿಯಿಂದ ನೋಡಿದವರು. ಅನ್ನಮಯ ಮಟ್ಟದ ಸಾಮಾನ್ಯ ಹೋರಾಟದಿಂದ ಹಿಡಿದು, ಆನಂದಮಯದ ವರೆಗಿರುವ ಎಲ್ಲ ಭೂಮಿಕೆಗಳಲ್ಲಿಯೂ ನಿಂತು ನೋಡಿದವರು. ಯಾವುದನ್ನೂ ತಿರಸ್ಕರಿಸದೆ ಈ ಎಲ್ಲ ವೈವಿಧ್ಯ ವೈಪರೀತ್ಯ ಗಳಲ್ಲಿಯೂ ಏಕಸೂತ್ರದ ಸಾಮರಸ್ಯವನ್ನು ಕಂಡುಕೊಂಡವರು. 'ಇದನ್ನು' ಬಿಡದೆ 'ಅದನ್ನು' ಹಿಡಿಯುವ ಅಪೂರ್ವ ಸಾಹಸ ಅವರದು. ಅವರ ಈ ಸಾಧನೆ ಮತ್ತು ಅದರಲ್ಲಿ ಅವರು ಪಡೆದ ಸಿದ್ಧಿ ಇವುಗಳೆಲ್ಲವೂ ಅವರ ನುಡಿಗಳಲ್ಲಿ ವ್ಯಕ್ತವಾಗಿವೆ.

'ದರ್ಶನ', 'ಧರ್ಮ', 'ಜೀವನದ ಗುರಿ' ಮುಂತಾದ ಮಾತುಗಳಿಗೆ ಅವಕಾಶವಿತ್ತಾಗ, ಸಾಹಿತ್ಯದ ಬೆನ್ನು ವಿಚಾರದ ಭಾರದಿಂದ ಬಾಗುತ್ತದೆ; ಸಾಹಿತ್ಯಕ್ಕೆ ಆವಶ್ಯಕವಾದ ಮೂಲ

ಲಕ್ಷಣವನ್ನು ಕಳೆದುಕೊಳ್ಳುತ್ತದೆ ಎನ್ನುವ ಅಭಿಪ್ರಾಯವೂ ಉಂಟು. ಆ ಮಾತಿನಲ್ಲಿ ಸತ್ಯವೂ ಇಲ್ಲದಿಲ್ಲ. ಸಾಹಿತ್ಯದ ಮುಖ್ಯ ಲಕ್ಷಣ ಬುದ್ಧಿ ತರ್ಕಗಳ ವಿನ್ಯಾಸವಲ್ಲ, ಅದರ ಮುಖ್ಯ ಗುರಿ ಆನಂದವನ್ನುಂಟುಮಾಡುವುದು. ಆದರೆ ಇಲ್ಲಿ 'ಆನಂದ' ಎಂಬ ಮಾತಿನ ವ್ಯಾಪ್ತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. 'ಆನಂದ'ವೆನ್ನುವುದು ಮನಸ್ಸನ್ನು ತಾತ್ಕಾಲಿಕವಾಗಿ ತೃಪ್ತಿ ಪಡಿಸುವ ಲಘು ಸಾಧನವಲ್ಲ. ನಾವು ತಿನ್ನುವ ಅನ್ನವೂ ಒಂದು ಸ್ಥಿತಿಯಲ್ಲಿ ಅದನ್ನು ಮಾಡಬಲ್ಲುದು. ಸಾಹಿತ್ಯದ ಆನಂದ ಮನಸ್ಸನ್ನು ಅರಳಿಸಿ, ಹೃದಯವನ್ನು ಉದ್ದೀಪನಗೊಳಿಸಿ ವ್ಯಕ್ತಿತ್ವ ವನ್ನು ವಿಕಾಸಪಡಿಸುವ ಚೈತನ್ಯಶಕ್ತಿಯೂ ಆಗಬೇಕು. ಜೀವನದ ಸಂಪೂರ್ಣ ದರ್ಶನ, ಸಾಹಿತ್ಯದಲ್ಲಿ ಆನಂದರೂಪವಾಗಿ ಲಭಿಸು ತ್ತದೆ. ಅಂತಹ ಶಕ್ತಿಯನ್ನು ಒಳಗೊಂಡಾಗಲೇ ಸಾಹಿತ್ಯ ಸಾರ್ಥಕ ವಾಗುತ್ತದೆ. ಆ ಸಾರ್ಥಕತೆಯನ್ನು ಪಡೆದಿದೆ ಶರಣ ಸಾಹಿತ್ಯ.

ಈ ಶಕ್ತಿ ಅವರಿಗೆ ಜೀವನದ ಅಪಾರವಾದ ಅನುಭವದಿಂದ ಉಂಟಾದುದು. ಶರಣರು ತೆರೆದ ಕಣ್ಣುಗಳಿಂದ ಜೀವನವನ್ನು ನೋಡಿದವರು. ದಿಟ್ಟತನದಿಂದ ಅದನ್ನು ಎದುರಿಸಿದವರು. ಸುತ್ತುಮುತ್ತಲಿನ ಸಹಜೀವಿಗಳ ದುಃಖವನ್ನೂ, ಅಜ್ಞಾನ ವನ್ನೂ ಅಳಲನ್ನೂ ಕಂಡು ಮರುಗಿದವರು, ಕೆರಳಿದವರು. ಸಮಸ್ಯೆಗಳ ಹಿಮಾಲಯವನ್ನು ಮೆಟ್ಟಿನಿಂತು, ಸಾಧನೆಯಲ್ಲಿ ಮೇಲೇರಿ ಸತ್ಯವನ್ನು ಕಂಡವರು. ಈ ಎಲ್ಲ ಅನುಭವಸಾಧನೆ ನಿರೀಕ್ಷಣೆಗಳಿಂದ ವಿಕಾಸಗೊಂಡ ಅವರ ಚೇತನ, ವಚನರೂಪದಲ್ಲಿ ಮಿಡಿದಿದೆ. ಅಲ್ಲಮಪ್ರಭು ಹೇಳುವಂತೆ "ಮಾತೇ ಜ್ಯೋತಿ ರ್ಲಿಂಗ"ವಾಗಿ ಪರಿಣಮಿಸಿದೆ.

ಎಲ್ಲ ವಚನಕಾರರ ಎಲ್ಲ ಮಾತುಗಳೂ, ಎಲ್ಲ ಸಮಯ

ಗಳಲ್ಲಿಯೂ ಇದೇ ಮಟ್ಟದಲ್ಲಿ ಮಿಡಿಯುತ್ತವೆ ಎನ್ನಲಾಗದಿದ್ದರೂ, ಅವರ ಮುಂದಿದ್ದ ಚಿರಂತನವಾದ ಸ್ಫೂರ್ತಿಯ ಸೆಲೆಯಿದು, ಆದರ್ಶದ ಶಿಖರವಿದು. ಶರಣರೆಲ್ಲರೂ ಅದನ್ನು ಏರಲು ಪ್ರಯತ್ನಿಸಿದವರು. ಅನೇಕರು ಅದನ್ನು ಏರುವುದರಲ್ಲಿ ಕೃತಕೃತ್ಯ ರಾದವರು. ಕೆಲವರಂತೂ ಇದನ್ನೂ ಮೀರಿನಿಂತ ಮಹಾಂತರು. ಅವರ ಈ ಎಲ್ಲ ನಿಲವಿನ ಅಭಿವ್ಯಕ್ತಿ ಅವರ ವಚನಗಳಲ್ಲಿ ಕಂಡುಬರುತ್ತದೆ.

ಸಾಹಿತಿ ವಸ್ತುವಿನರೂಪವನ್ನು ವರ್ಣಿಸುತ್ತಾನೆ. ಅನುಭಾವಿ ವಸ್ತುವಿನ ಸ್ವರೂಪ ರಹಸ್ಯವನ್ನು ಕುರಿತು ಯೋಚಿಸುತ್ತಾನೆ. ತನ್ನ ಭಾವನೆಗಳಿಗೆ ರೂಪಧಾರಣೆ ಮಾಡುವ ಪ್ರಯತ್ನ ಸಾಹಿತಿಯದಾದರೆ, ಆ ಭಾವನೆಗಳನ್ನೇ ಅನುಸರಿಸಿ ನಡೆದು, ಅವುಗಳಿಂದ ಪರಿಪುಷ್ಟಿಯನ್ನು ಪಡೆದು ಮೇಲೇರುವವನು ಅನು ಭಾವಿ. ಶರಣರಲ್ಲಿ ಈ ಶಕ್ತಿಯನ್ನು ಕಾಣುತ್ತೇವೆ. ಲೋಕದ ಘಟನೆಗಳನ್ನು ಕಂಡು ಅವರ ಮನಸ್ಸು ಕವಿಯಂತೆ ಮಿಡಿದಿದೆ; ಸಾಹಿತಿಯಂತೆ ಕೆರಳಿದೆ; ಅದು ಅಷ್ಟರಲ್ಲೇ ಕೊನೆಗೊಳ್ಳದೆ ಅವರ ಮುಂದಿನ ಸಾಧನೆಗೂ ತಳಹದಿಯಾಗಿದೆ; ಪ್ರೇರಕ ಶಕ್ತಿಯಾಗಿದೆ.

ಈ ಲೋಕವನ್ನು ಕಣ್ದೆರೆದು ನೋಡಿದಾಗ ವಿಚಾರವಂತ ಮಾನವನಿಗೆ ಮೊಟ್ಟ ಮೊದಲು ತೋರುವ ಭಾವ, ಈ ಸೃಷ್ಟಿಗೂ ಇದರಲ್ಲಿ ಬಾಳುತ್ತಿರುವ ತನಗೂ ಇರುವ ಸಂಬಂಧವೇನು? ಎಂಬುದು. ಇದರ ಮಡಲಿನಲ್ಲಿರುವ ಮಾನವನ ಜೀವನದ ಉದ್ದೇಶವೇನು? ಇದರ ಪರ್ಯವಸಾನ ಹೇಗೆ? ಇವನ ಕನಸು ಗಳನ್ನೆಲ್ಲಾ ತನ್ನ ಪದಾಘಾತದಿಂದ ಧೂಳೀಪಟಮಾಡುವ ಶಕ್ತಿ ಯಾವುದು? ಈ ದುಃಖಕ್ಕೆ ಕಾರಣವೇನು? ಇದಕ್ಕೆ ಕೊನೆ ಹೇಗೆ? ಈ ನೂರಾರು ಪ್ರಶ್ನೆಗಳು ಎದುರಾಗುತ್ತವೆ. ಈ ಎಲ್ಲ

ಭಾವನೆಗಳನ್ನೂ ಶರಣರು ವಿವೇಚಿಸಿದ್ದಾರೆ. ತರ್ಕಬದ್ಧವಾದ ತತ್ತ್ವ ಜಿಜ್ಞಾಸೆಯು ಸಿದ್ಧಾಂತದ ರೂಪದಲ್ಲಲ್ಲ. ಅಂತಹ ವಚನಗಳೂ ಉಂಟು. ಆದರೆ ಅದಕ್ಕಿಂತ ಹೆಚ್ಚಾಗಿ ಕವಿಹೃದಯದ ಪ್ರತಿಭಾಶಕ್ತಿಯಿಂದ ಈ ವಿಚಾರಗಳಿಗೆ ಹೊಸ ಬೆಳಕನ್ನಿತ್ತಿದ್ದಾರೆ ಶರಣರು.

ಸಾಧಕನ ವಿವಿಧ ಮನೋಭೂಮಿಕೆಗಳು, ಆತನು ಎದುರಿಸಬೇಕಾದ ವಿವಿಧ ಸಮಸ್ಯೆಗಳು, ಸಂದೇಹಗಳು, ಆತನು ಎಚ್ಚರಿಕೆಯಿಂದ ಆಚರಿಸಬೇಕಾದ ನೈತಿಕ ಆಧ್ಯಾತ್ಮಿಕ ಆಚರಣೆಗಳು—ಇವೆಲ್ಲವೂ ಶರಣರ ಅಂತರಂಗದಿಂದ ಜೀವಂತವಾಗಿ ಮೂಡಿವೆ. ಕೇವಲ ಬುದ್ಧಿಪ್ರಧಾನವಾಗಿ ನೀರಸವಾಗಬಹುದಾಗಿದ್ದ ಸಂದರ್ಭಗಳಲ್ಲಿ ಕೂಡ 'ಸರಸ'ವಾಗಿ ಹೇಳಬಲ್ಲ ಶಕ್ತಿ ಅನೇಕ ಶರಣರಿಗಿದೆ. ಸೃಷ್ಟಿ, ಸೃಷ್ಟಿಕರ್ತ, ಮೋಕ್ಷದ ಸ್ವರೂಪ—ಈ ಮೊದಲಾದವುಗಳ ಸೂಕ್ಷ್ಮ ವಿವೇಚನೆಯ ಭಾರವನ್ನೂ ವಚನಗಳು ಲೀಲಾಜಾಲವಾಗಿ ಹೊರಬಲ್ಲವು, ಕಾವ್ಯ ಸೌಂದರ್ಯವನ್ನು ಬೀರಬಲ್ಲವು.

ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು,
ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯ ವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು,
ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ.

ತಂದೆತಾಯಿ ಇಲ್ಲದ ಕಂದಾ ನಿನಗೆ ನೀನೇ ಹುಟ್ಟಿಬೆಳೆದೆಯಲ್ಲಾ!
ನಿನ್ನ ಪರಿಣಾಮವೇ ನಿನಗೆ ತೃಪ್ತಿಯಾಗಿ ಇದ್ದೆಯಲ್ಲ,
ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲ
ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ.

ಎಂದು ಅಲ್ಲಮಪ್ರಭು ಆ ಪರಮಾತ್ಮನ ಅವ್ಯಕ್ತಸ್ವರೂಪವನ್ನು ವರ್ಣಿಸುವುದನ್ನು ನೋಡಬಹುದು.

ಸರ್ವವಸ್ತುಗಳಲ್ಲಿಯೂ ಶಿವ ವ್ಯಾಪಿಸಿರುವ ರೀತಿಯನ್ನು ಶರಣರು ಸುಂದರವಾಗಿ ಹೀಗೆ ಹೇಳಿದ್ದಾರೆ:

ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು,
ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು;
ಚಿತ್ರಕನೊಳಡಗಿದ ಚಿತ್ರದಂತೆ ಇದ್ದಿತ್ತು,
ಆಲಿಯೊಳಡಗಿದ ತೇಜದಂತೆ ಇದ್ದಿತ್ತು;
ನುಡಿಯೊಳಡಗಿದ ಅರ್ಥದಂತೆ ಇದ್ದಿತ್ತು,
ಕೂಡಲ ಚನ್ನಸಂಗಯ್ಯ ನಿಮ್ಮ ನಿಲವು.

ಅವನು ವಿಶ್ವಭರಿತ, ವಿಶ್ವರೂಪ, ವಿಶ್ವಪತಿ. ಆದರೂ ವಿಶ್ವಾತೀತ. ಅಷ್ಟೇ ಅಲ್ಲದೆ ವಿಶ್ವಕ್ಕೆಲ್ಲಾ ಆಧಾರಭೂತನಾದವನು. ಅಲ್ಲಮ ಪ್ರಭು ಅದನ್ನು ಸುಂದರವಾದ ಸಾದೃಶ್ಯದಿಂದ ಹೇಳಿದ್ದಾನೆ:

ಸಮುದ್ರದೊಳಗೆ ನೆರೆತೊರೆಗಳು ನೆಗಳ್ದವೆಂದರೆ
ಸಮುದ್ರದಿಂದನ್ಯವಪ್ಪವೇ?
ನಿರ್ವಿಕಾರ, ನಿತ್ಯ, ನಿರಂಜನ, ನಿರ್ಗುಣ, ಪರಿಪೂರ್ಣ, ನಿರ್ವಿಕಲ್ಪ
ಪರಬ್ರಹ್ಮ ಶಿವನಿಂದ ಜಗತ್ತುದಯಿಸಿತ್ತೆಂದಡೆ
ಶಿವನಿಂದನ್ಯವೆನ್ನಬಹುದೇ?
ಇಂತಪ್ಪ ಅರಿವ ನೀವು ಕೊಟ್ಟು
ಸಮ್ಯಜ್ಞಾನ ಕಂದೆರೆದಿಪ್ಪುದಯ್ಯ ಗುಹೇಶ್ವರಾ.

ಸಮುದ್ರದಿಂದ ತೆರೆಗಳು ಎದ್ದರೂ ವಾಸ್ತವವಾಗಿ ಅವು ಸಮುದ್ರದ ಒಂದು ಭಾಗವೇ. ಸಮುದ್ರ ಕೆಲವು ವೇಳೆ ತರಂಗಿತ ವಾಗುತ್ತದೆ. ಮತ್ತೆ ಕೆಲವು ವೇಳೆ ಆ ತರಂಗಗಳನ್ನೆಲ್ಲಾ ತನ್ನಲ್ಲಿ ಅಡಗಿಸಿಕೊಂಡು ನಿಸ್ತರಂಗ ಗಂಭೀರವಾಗುತ್ತದೆ. ಸೃಷ್ಟಿ ಮತ್ತು ಸೃಷ್ಟಿಕರ್ತರ ಸಂಬಂಧ ಇಂಥದು ಎನ್ನುತ್ತಾನೆ ಅಲ್ಲಮಪ್ರಭು.

ಲಿಂಗದಂತೆ ಅಂಗವೂ ಶಿವನೆಂಬ ಚೈತನ್ಯ ಸಾಗರದಲ್ಲಿ ಉಂಟಾದ ಒಂದು ಅಲೆ. ಲಿಂಗ ತನ್ನ ಸಹಜಶಕ್ತಿಯೊಡಗೂಡಿ ಶಿವಸ್ವರೂಪವಾಗಿಯೇ ಉಳಿಯುತ್ತದೆ. ಆದರೆ ಅಂಗ ಆಣವಾದಿ

ಮಲತ್ರಯಗಳಿಂದ ಬಂಧಿತವಾಗಿ ತನ್ನ ನಿಜಸ್ವರೂಪವನ್ನು ಕಳೆದು ಕೊಂಡು ಬದ್ಧಜೀವರುಗಳಾಗಿ ಪರಿಣಮಿಸುತ್ತದೆ. ಇವರು ಗುರುವಿನಿಂದ ದೀಕ್ಷೆಯನ್ನು ಪಡೆದು ಶುದ್ಧ ಜೀವರುಗಳಾಗಿ ಪರಿಣಮಿಸಬೇಕು. 'ಅಂಗ'ವೆನ್ನಿಸಿಕೊಳ್ಳುವ ಈ ಶುದ್ಧಜೀವ ತನ್ನ ಸಾಧನೆಯಿಂದ ಅಪೂರ್ಣತ್ವವನ್ನು ಕಳೆದುಕೊಂಡು ನೀರಿನ ಹನಿ ಸಮುದ್ರವನ್ನು ಸೇರುವಂತೆ ಸಾಕ್ಷಾತ್ ಶಿವಸ್ವರೂಪವಾದ ಲಿಂಗದಲ್ಲಿ ಕೂಡಿ ಸಚ್ಚಿದಾನಂದ ಸ್ವರೂಪವಾಗಿ ಪರಿಣಮಿಸುತ್ತದೆ. ಇದೇ ಲಿಂಗಾಂಗ ಸಾಮರಸ್ಯ; ಇದೇ ಮೋಕ್ಷ—ಈ ತತ್ವ ಸಿದ್ಧಾಂತದ ಹಂದರದ ಮೇಲೆ ಬೆಳೆದು ಹಬ್ಬಿದೆ ಶರಣರ ಅನುಭಾವ ಮಾರ್ಗ.

ಶರಣರ ಮೋಕ್ಷದ ನಿಲವನ್ನು ಹಾವಿನಹಾಳ ಕಲ್ಲಯ್ಯ ತುಂಬಾ ಸುಂದರವಾಗಿ ವರ್ಣಿಸಿದ್ದಾನೆ :

ಕರ್ಪುರದ ಕಳ್ಳನ ಹುಲ್ಲಿನಲ್ಲಿ ಕಟ್ಟಿರಲು,
ಅಗ್ನಿಯೆಂಬ ಹಿತವು ಬಂದು ಬಿಡಿಸಲು,
ಪಾಶ ಬೆಂದು ಕಳ್ಳ ತನ್ನಲ್ಲಿಯೇ ಅಡಗಿದನು.
ಬಯಲ ಶರಣಂಗೆ ಬಯಲ ಪಾಶ ಬಂದು ಕಟ್ಟಿರಲು,
ಬಯಲ ಲಿಂಗ ಬಂದು ಬಿಡಿಸಲು
ಬಯಲು ಬಯಲೇಕವಾಯಿತ್ತು
ಮಹಾಲಿಂಗ ಕಲ್ಲೇಶ್ವರನೆಂಬ ಸಂಪತ್ತು ಸದಾಶೂನ್ಯವಾಯಿತ್ತು

ಅಗೆದಷ್ಟೂ ಅರ್ಥವನ್ನು ಚಿಮ್ಮುವ ಅನುಭಾವದ ಚಿಲುಮೆ ಯಂತಿದೆ ಈ ವಚನ.

ಇಲ್ಲಿ ವೀರಶೈವದೃಷ್ಟಿ ಅದ್ವೈತಕ್ಕೆ ಸಂವಾದಿಯಾಗಿರುವುದನ್ನು ಕಾಣಬಹುದು. ಆದರೆ 'ಶಿವೋಹಂ' ಎಂಬ ಅದ್ವೈತ ಸ್ಥಿತಿಯೊಂದೇ ಸತ್ಯ, ಉಳಿದುದೆಲ್ಲಾ ಮಿಥ್ಯವೆಂದು ವೀರಶೈವ ಹೇಳುವುದಿಲ್ಲ. ಐಕ್ಯಸ್ಥಲದಷ್ಟೇ ಭಕ್ತ ಮಹೇಶ್ವರಾದಿ ಸ್ಥಲಗಳೂ

ಸಾಧಕರ ಆಯಾ ಸ್ಥಿತಿಗಳಲ್ಲಿ ಸತ್ಯವಾದವುಗಳು ಎನ್ನುತ್ತದೆ. ಅಲ್ಲದೆ ಆ ಶಿವತತ್ವವನ್ನು ಸಾಧಿಸಲು ವೀರಶೈವವು ರೂಪಿಸಿ ಕೊಂಡಿರುವ ಮಾರ್ಗವೂ ಅದ್ವೈತ ಮಾರ್ಗದಿಂದ ಸಂಪೂರ್ಣ ವಾಗಿ ಭಿನ್ನವಾದುದು, ವಿಶಿಷ್ಟವಾದುದು. ಅದೇ ಷಟ್‌ಸ್ಥಲ ಸಿದ್ಧಾಂತ.

ಜೀವವು ದೇವನತ್ತ ಸಾಗುವ ತನ್ನ ಯಾತ್ರೆಯ ಮಾರ್ಗದಲ್ಲಿ ಏರಬೇಕಾದ ಆರು ಮೆಟ್ಟಲುಗಳೆನ್ನಬಹುದು ಈ ಷಟ್‌ಸ್ಥಲಗಳು. ತನ್ನ ನಿಜಸ್ವರೂಪವನ್ನು ಮರೆತು ತಾನು ದುಃಖಿ ಎಂದು ತಲ್ಲಣಗೊಳ್ಳುವ ಭಕ್ತನ ಮನಸ್ಸಿನ ತಳಮಳದಿಂದ ಹಿಡಿದು ವಿಶ್ವವನ್ನೆಲ್ಲಾ ವ್ಯಾಪಿಸಿರುವ ಚೈತನ್ಯಸ್ವರೂಪ ಶಕ್ತಿಯೇ ತಾನೆಂಬ ಮುಕ್ತಿಯ ಶಾಂತಭಾವದವರೆಗಿನ ಎಲ್ಲ ಮನೋಧರ್ಮಗಳನ್ನೂ ಷಟ್‌ಸ್ಥಲಗಳಲ್ಲಿ ಕಾಣುತ್ತೇವೆ. ಷಟ್‌ಸ್ಥಲ ಮಾರ್ಗದಲ್ಲಿ ಭಕ್ತಿ, ಕರ್ಮ, ಜ್ಞಾನ—ಇವೆಲ್ಲಕ್ಕೂ ಪ್ರಾಮುಖ್ಯವಿದೆ. ಇವೆಲ್ಲವು ಗಳ ಸಮನ್ವಯವೇ ಈ ಮಾರ್ಗದ ವೈಶಿಷ್ಟ್ಯ.

ಅಲ್ಲಮಪ್ರಭುವಿನ ಈ ಒಂದು ವಚನ ಷಟ್‌ಸ್ಥಲಗಳ ಸಾರವನ್ನೆಲ್ಲಾ ಸಂಗ್ರಹವಾಗಿ ಹೇಳುತ್ತದೆ:

> ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ
> ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ,
> ಆ ಸಾವಧಾನದೊಳಗಣ ಸ್ವಾನುಭವದಿಂ ಪ್ರಾಣಲಿಂಗಿಯಾಗಿ,
> ಆ ಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ,
> ಆ ಅರಿವು ನಿಜದಲ್ಲಿ ಸಮರಸ ಭಾವವನ್ನೈದಿದ ನಿರ್ಭಾವ ಪದದೊಳ
> ನಿಂದ ಭೇದವೇ ಐಕ್ಯಸ್ಥಲಕಾಣಾ ಗುಹೇಶ್ವರಾ.

ವಿಶ್ವಾಸ, ನಿಷ್ಠೆ, ಸಾವಧಾನ, ಸ್ವಾನುಭಾವ, ಅರಿವು, ಇವುಗಳಿಂದ ವಿಕಾಸಗೊಂಡ ಸಾಧಕ ಸಮರಸಭಾವವನ್ನು ಪಡೆದು, ಕೊನೆ

ನಿರ್ಭಾವದ ಪದದಲ್ಲಿ ನಿಲ್ಲುತ್ತಾನೆ. ಈ ಷಟ್‌ಸ್ಥಲ ಮಾರ್ಗದ ಅತಿಸುಂದರವಾದ ನಿರೂಪಣೆ ಶರಣರ ವಚನಗಳಲ್ಲಿ ಮೂಡಿ ಬಂದಿದೆ. ಸಾಹಿತ್ಯದ ಸೊಬಗನ್ನು ಕಳೆದುಕೊಳ್ಳದೆ, ಗಹನವಾದ ತತ್ವವಿಚಾರಗಳ ಭಾರವನ್ನು ಸರಳವಾದ ಮಾತುಗಳಲ್ಲಿ ನಿರ್ವಹಿಸ ಬಲ್ಲ ಒಂದು ವಿಶಿಷ್ಟ ಶಕ್ತಿಯನ್ನೇ ಕನ್ನಡಭಾಷೆ ಶರಣರಿಂದ ಪಡೆಯಿತು.

ಈ ಮಾತು ಇನ್ನೂ ಸ್ಪಷ್ಟವಾಗಿ ಅನುಭವಕ್ಕೆ ಬರುವುದು ಅನುಭಾವ ಮಾರ್ಗದ ಕೊನೆಯ ನಿಲವನ್ನು ಹೇಳುವಾಗ. ಅವರ ಸಂದೀರ್ಘ ಸಾಧನೆಯ ಸಾಹಸಯಾತ್ರೆ ಅಪೂರ್ವವಾದ ಸಿದ್ಧಿ ಲೋಕಕ್ಕೆ ಅವರನ್ನು ಕರೆದೊಯ್ದಿದೆ. ಮಾನವತೆಯು ಏರ ಬಹುದಾದ ಅತ್ಯುಚ್ಚ ಶಿಖರವನ್ನು ಏರಿನಿಂತಿದ್ದಾರೆ, ಮಾತು ಮನಂಗಳಿಂದತ್ತತ್ತ ಮೀರಿದ ಪರಂಜ್ಯೋತಿಯನ್ನು ಪ್ರತ್ಯಕ್ಷ ಕಂಡಿದ್ದಾರೆ. ತಾವೇ ಸ್ವರೂಪತಃ 'ಅದಾಗಿ' ಪರಿಣಮಿಸಿದ್ದಾರೆ. ಈ ನಿಲವಿನಲ್ಲಿ ನಿಂತು ಆ ಅನಿರ್ವಚನೀಯವಾದ ಅನುಭವವನ್ನು ಮಾತುಗಳಲ್ಲಿ ಹಿಡಿದಿಡುವ ಸಾಹಸ, ಕನ್ನಡ ಭಾಷೆಗೆ ಆಶ್ಚರ್ಯಕರ ವಾದ ಶಕ್ತಿಯನ್ನು ತಂದುಕೊಟ್ಟಿದೆ.

ಅಲ್ಲಮಪ್ರಭುವಂತೂ ಇದರಲ್ಲಿ ಅದ್ವಿತೀಯ. ತನ್ನ ಅದ್ಭುತ ವೈರಾಗ್ಯ ಸಾಧನೆಯಿಂದ ಶಿವಾದ್ವೈತದ ಚರಮಸೀಮೆಯನ್ನೂ ಕಂಡವನು ಆತ. ಮತ್ತು ಅದನ್ನು ಅಷ್ಟೇ ಪ್ರಭಾವಶಾಲಿಯಾದ ರೀತಿಯಲ್ಲಿ ಹೊರಹೊಮ್ಮಿಸಬಲ್ಲವನು. ಸಾಸುವೆಯಲ್ಲಿ ಸಾಗರ ವನ್ನು ತುಂಬಬಲ್ಲ ಸಾಹಸಿ.

ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯ,
ಬಯಲ ಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯಾ
ಕರುವಿನ ಬೊಂಬೆಯುನುರಿ ಕೊಂಡಂತಾದೆನಯ್ಯ,
ಗುಹೇಶ್ವರ ಲಿಂಗವ ಪೂಜಿಸಿ ಭವಗೆಟ್ಟೆನಯ್ಯ.

ಕರ್ಪುರದ ಗಿರಿಯನುರಿ ಹಿಡಿದ ಬಳಿಕ ಇದ್ದಿಲುಂಟೇ?
ಕೆಂಡದ ಗಿರಿಯ ಅರಗಿನ ಬಾಣದಲೆಚ್ಚಡೆ
ಮರಳಿ ಬಾಣವನರಸಲುಂಟೇ?
ಗುಹೇಶ್ವರ ಲಿಂಗವನರಿದ ಬಳಿಕ ದೇವರೆಂದು ಅರಸಲುಂಟೇ?

ಸ್ವಸ್ಥಾನ ಸುಸ್ಥಿರದ ಸುಮನ ಮಂಟಪದೊಳಗೆ
ನಿತ್ಯ ನಿರಂಜನ ಪ್ರಭೆಯ ಬೆಳಗು !
ಶಿವಯೋಗದನುಭಾವ ಏಕಾರ್ಥವಾಗಿ, ಗುಹೇಶ್ವರಾ,
ನಿಮ್ಮ ಶರಣನು ಅನುಪಮ ಸುಖಿಯಾಗಿರ್ದನು.

ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ,
ಆಕಾಶಗಂಗೆಯಲ್ಲಿ ಮಜ್ಜನ,
ಹೂವಿಲ್ಲದ ಪರಿಮಳದ ಪೂಜೆ,
ಹೃದಯಕಮಲದಲ್ಲಿ ಶಿವ ಶಿವ ಎಂಬ ಶಬ್ಧ,
ಇದು ಅದ್ವೈತ ಕಾಣಾ ಗುಹೇಶ್ವರಾ.

ಬಿಸಿಲೆಂಬ ಗುರುವಿಗೆ ನೆಳಲೆಂಬ ಶಿಷ್ಯ,
ನಿರಾಳ ಲಿಂಗಕ್ಕೆ ಬಯಲೆ ಸೆಜ್ಜೆ,
ವಾಯುವೇ ಶಿವದಾರ, ಬೆಳಗೇ ಸಿಂಹಾಸನ,
ಅತ್ತಲಿತ್ತ ಚಿತ್ತವ ಹರಿಯಲೀಯದೆ,
ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ.

ತನುವೆಂಬ ಏರಿಗೆ, ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ;
ಪರಮಾನಂದವೆಂಬ ಜಲವ ತುಂಬಿ,
ಕೆರೆಯು ಕಟ್ಟಬಲ್ಲವರನಾರನೂ ಕಾಣೆ,
ನಾ ಕಟ್ಟದ ಕೆರೆ ಸ್ಥಿರವಾಯಿತ್ತು, ಗುಹೇಶ್ವರಾ ನಿಮ್ಮಾಣೆ.

ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ
ಚಂದ್ರ ಸೂರ್ಯರಿಬ್ಬರು ಪುಷ್ಪ, ಬ್ರಹ್ಮಧೂಪ, ವಿಷ್ಣುದೀಪ
ರುದ್ರನೋಗರ, ಸುಯಿಧಾನ ನೋಡಾ,
ಗುಹೇಶ್ವರಲಿಂಗಕ್ಕೆ ಪೂಜೆ ನೋಡಾ!

ಪ್ರಭುದೇವನ ಇಂತಹ ವಚನಗಳನ್ನು ಎಷ್ಟು ಬೇಕಾದರೂ ಉದಾಹರಿಸಬಹುದು. ಇವುಗಳ ಭವ್ಯವಾದ ಬೆಳಕಿನಿಂದ ನಮ್ಮ ಕಲ್ಪನೆ ಕಣ್ಣುಮುಚ್ಚುತ್ತದೆ. ಬುದ್ಧಿ ದಿಗ್ಭ್ರಮೆಗೊಳ್ಳುತ್ತದೆ. ಅನುಭವ ಆ ಎತ್ತರಕ್ಕೆ ಏರಲಾರದೆ ನಡುಗುತ್ತದೆ. ಜ್ಯೋತಿರ್ ಲಿಂಗವೇ ಮಾತಿನರೂಪದಲ್ಲಿ ಮೂಡಿಬಂದಂತೆ ಅನಿಸುತ್ತದೆ. ಇವುಗಳನ್ನು ಓದಿದಾಗ ಕಾವ್ಯವನ್ನು ಕುರಿತು ಅರವಿಂದರು ಹೇಳುವ: "Poetry translates the truth of the higher plane of consciousness in the language of the lower one." ಎಂಬ ಮಾತಿನ ಅರ್ಥ ಮನದಟ್ಟಾಗುತ್ತದೆ. ಈತನವೇ ಇನ್ನೂ ಒಂದೆರಡು ವಚನಗಳನ್ನು ನೋಡಬಹುದು

ಮನವೇ ಲಿಂಗವಾದ ಬಳಿಕ ನೆನಹುದಿನ್ನಾರನಯ್ಯಾ!
ಭಾವವೇ ಐಕ್ಯವಾದ ಬಳಿಕ ಬಯಸುವುದಿನ್ನಾರನಯ್ಯಾ;
ಭ್ರಮೆಯಳಿದು ನಿಜವು ಸಾಧ್ಯವಾದ ಬಳಿಕ
ಅರಿವುದಿನ್ನಾರನಯ್ಯಾ ಗುಹೇಶ್ವರಾ.

ನೆನೆ ನೆನೆಯೆಂದೊಡೆ ಏನ ನೆನೆವೆನಯ್ಯಾ!
ಎನ್ನ ಕಾಯವೇ ಕೈಲಾಸವಾಯಿತ್ತು
ಮನವೇ ಲಿಂಗವಾಯಿತ್ತು
ತನುವೇ ಸಜ್ಜೆಯಾಯಿತ್ತು
ನೆನೆವಡೆ ದೇವನುಂಟೇ? ನೋಡುವಡೆ ಭಕ್ತನುಂಟೇ?
ಗುಹೇಶ್ವರ ಲಿಂಗ ಲೀಯ್ಯವಾಯಿತ್ತು.

ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು
ಬಯಲು ಬಯಲಾಗಿ ಬಯಲಾಯಿತ್ತಯ್ಯಾ!
ಬಯಲ ಜೀವನ, ಬಯಲ ಭಾವನೆ.
ಬಯಲು ಬಯಲಾದೆ ಗುಹೇಶ್ವರಾ.

ಜೀವನು ಏರಬಹುದಾದ ಕೊನೆಯ ನಿಲವನ್ನು ಕುರಿತ ಈ ಮಾತುಗಳು ಪ್ರಭುದೇವನು ವಿಶ ಸಾಹಿತ್ಯಕ್ಕೆ ಕೊಟ್ಟ ಕಾಣಿಕೆ ಎನ್ನಬಹುದು.

ಇನ್ನು ಬಸವೇಶ್ವರನ ವಚನಗಳಲ್ಲಿಯಂತೂ ಭಕ್ತಿಯು ಮಿಡಿತ ಎಲ್ಲರ ಚೈತನ್ಯಗಳಲ್ಲಿಯೂ ಆ ದಿವ್ಯಧ್ವನಿ ಮಿಡಿಯುವಂತೆ ಮಾಡುತ್ತದೆ. ಶರಣರಲ್ಲಿ ಆತನು 'ಭಕ್ತಿಭಂಡಾರಿ' ಎಂದೇ ಪ್ರಸಿದ್ಧನಾಗಿದ್ದಾನೆ. "ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ, ಎತ್ತೆತ್ತ ನೋಡಿದಡೆ ಅತ್ತತ್ತ ಲಿಂಗವೆಂಬ ಗೊಂಚಲು, ಒತ್ತಿಹಿಂಡಿದರೆ ಭಕ್ತಿಯೆಂಬ ರಸವಯ್ಯ" ಎಂದು ಮಡಿವಾಳ ಮಾಚಯ್ಯ ಸುಂದರವಾಗಿ ಬಸವಣ್ಣನವರ ಭಕ್ತಿಯ ಚಿತ್ರವನ್ನು ಕೊಟ್ಟಿದ್ದಾನೆ. ಇವರ ವಚನಗಳಲ್ಲಿ ಸರಳವಾದ, ನೇರವಾದ ಮತ್ತು ಹೃದಯದಿಂದ ಹೃದಯಕ್ಕೆ ಮುಟ್ಟಬಲ್ಲ ಶಕ್ತಿಯನ್ನು ಕಾಣುತ್ತೇವೆ. ಭಕ್ತನ ಪ್ರಾರಂಭದ ಸ್ಥಿತಿಯಾದ ಹೃದಯದ ತಳಮಳದಿಂದ ಹಿಡಿದು, ಅನುಭಾವದ ಶಾಂತಸ್ಥಿತಿಯವರೆಗೆ ಅವರ ಸಾಧನೆಯ ವಿವಿಧ ಮಟ್ಟಗಳೆಲ್ಲಾ ಅವರ ವಚನಗಳಲ್ಲಿ ಯಥಾವತ್ತಾಗಿ ಒಡಮೂಡಿರುವುದರಿಂದ ಸಾಧಕರಿಗೆ ಅದೊಂದು ಭಕ್ತಿ ಸಾಧನೆಯ ಜೀವಂತ ಕೈಪಿಡಿಯಿದ್ದಂತೆ ಎಂದು ಹೇಳಬಹುದು.

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ
ಎನ್ನುವನು ಕಾಯಯ್ಯಾ! ಕಾಯಯ್ಯಾ!
ಹುರುಳಿಲ್ಲ, ಹುರುಳಿಲ್ಲ,
ಕೂಡಲ ಸಂಗಮ ದೇವಾ, ಶಿವಧೋ, ಶಿವಧೋ.

ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ,
ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ!
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಹುಮಾಡಿ
ನೀವಿರಿಸಿದಿರಿ ಕೂಡಲ ಸಂಗಮದೇವಾ.

ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸಿದಿರಯ್ಯಾ,
ಪಶುವೇನ ಬಲ್ಲುದು ಹಸುರೆಂದೆಳಸುವುದು;
ವಿಷಯರಹಿತನಮಾಡಿ, ಭಕ್ತಿರಸವ ದಣಿಯ ಮೇಯಿಸಿ,

ಸುಬುದ್ಧಿಯೆಂಬುದಕವನೆರೆದು
ನೋಡಿ ಸಲಹಯ್ಯಾ ಕೂಡಲ ಸಂಗಮದೇವಾ

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ,
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ,
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ,
ನಿಮ್ಮ ಶರಣರ ಪಾದವಲ್ಲದೆ
ಅನ್ಯವಿಷಯಕ್ಕೆಳಸದಂತೆ ಇರಿಸು
ಕೂಡಲ ಸಂಗಮದೇವಾ.

ಎನ್ನ ಕಾಯವ ದಂಡಿಗೆಯ ಮಾಡಯ್ಯ,
ಎನ್ನ ಸಿರವ ಸೋರೆಯ ಮಾಡಯ್ಯ,
ಎನ್ನ ನರವ ತಂತಿಯ ಮಾಡಯ್ಯ,
ಎನ್ನ ಬೆರಳ ಕಡ್ಡಿಯ ಮಾಡಯ್ಯ,
ಬತ್ತೀಸ ರಾಗವ ಹಾಡಯ್ಯ; ಉರದಲೊತ್ತಿ ಬಾರಿಸು
ಕೂಡಲ ಸಂಗಮದೇವಾ.

ಉಳ್ಳವರು ಶಿವಾಲಯುವ ಮಾಡುವರು
ನಾನೇನ ಮಾಡುವೆ, ಬಡವನಯ್ಯಾ,
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಸಿರ ಹೊನ್ನಕಳಶವಯ್ಯ,
ಕೂಡಲ ಸಂಗಮದೇವಾ ಕೇಳಯ್ಯ,
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

ಇಂತಹ ನೂರಾರು ವಚನಗಳನ್ನು ಬಸವಣ್ಣನವರಲ್ಲಿ ಕಾಣುತ್ತೇವೆ.

ಮನಸ್ಸಿನ ಚಂಚಲತೆ, ಸಂಸಾರದ ನಿಸ್ಸಾರತೆ ಇವುಗಳನ್ನು ದಾಟಿ ಅವರ ಮನಸ್ಸು ಏಕೈಕ ನಿಷ್ಠೆ, ಸರ್ವಾರ್ಪಣೆ, ಅಹಂಕಾರ ನಿರಸನ, ಗುರುಲಿಂಗಜಂಗಮದಾಸೋಹ—ಈ ಮೊದಲಾದ ಸಾಧನೆಯ ಮಾರ್ಗದಲ್ಲಿ ಬೆಳೆಯತೊಡಗುತ್ತದೆ. "ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ?" ಎನ್ನುತ್ತಿದ್ದ

ಅವರು "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ" ಎಂಬ ನಿಲವಿಗೆ ಬರುತ್ತಾರೆ. ಈ ಮಾನಸಿಕವಾದ ವಿಕಾಸದ ಸುಂದರವಾದ ಚಿತ್ರ ಅವರ ವಚನಗಳಲ್ಲಿ ಕಂಡುಬರುತ್ತದೆ. ಅನುಭಾವದ ಕೊನೆಯ ನಿಲವನ್ನು ಕುರಿತ ಅವರ ವಚನಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ನೋಡಬಹುದು :

ಏನ ಮಾಡುವೆ ಎನ್ನ ಪುಣ್ಯದ ಫಲವು
ಶಾಂತಿಯ ಮಾಡಹೋದರೆ ಬೇತಾಳನಾಯಿತ್ತು.
ಕೂಡಲಸಂಗಮದೇವನ ಪೂಜಿಸಿಹೆನೆಂದರೆ
ಭಕ್ತಿಯೆಂಬ ಮೃಗವೆನ್ನನಟ್ಟಿ ಬಂದು ನುಂಗಿತ್ತಯ್ಯಾ.

ಪೂಜೆಯುಳ್ಳನ್ನಬರ ಲಿಂಗವ ಹಾಡಿದೆ,
ಮಾಟವುಳ್ಳನ್ನಬರ ಜಂಗಮವ ಹಾಡಿದೆ,
ಜಿಹ್ವೆಯುಳ್ಳನ್ನಬರ ಪ್ರಸಾದವ ಹಾಡಿದೆ,
ಈ ತ್ರಿವಿಧ ನಾಸ್ತಿಯಾದ ಬಳಿಕ
ಎನ್ನ ನಾ ಹಾಡಿಕೊಂಡೆ ಕಾಣಾ ಕೂಡಲ ಸಂಗಮದೇವಾ.

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು;
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತು,
ಆಚಾರವೆಂಬ ಕಾಯಾಯಿತ್ತು,
ನಿಷ್ಪತ್ತಿಯೆಂಬ ಹಣ್ಣಾಯಿತು,
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

ಮಾತಿನ ಅರ್ಥಕ್ಕೆ ಮೀರಿದ ಪರಿಶುದ್ಧ ಭಾವನೆಯ ಉತ್ತುಂಗ ಶಿಖರವನ್ನು ಇಂತಹ ವಚನಗಳಲ್ಲಿ ಕಾಣುತ್ತೇವೆ. ಅಲ್ಲಮಪ್ರಭುವಿನ ವಚನಗಳಲ್ಲಿ ಕಂಡಂತೆಯೇ ಲಿಂಗಾಂಗ ಸಾಮರಸ್ಯದ ನಿಲವಿನ ಕೊನೆಯ ಹಂತವನ್ನು ಬಸವಣ್ಣನವರ ಈ ವಚನಗಳಲ್ಲಿ ನೋಡಬಹುದು.

ತಮ್ಮ ಸಾಧನೆಯಲ್ಲಿ ಸಿದ್ಧಿಯನ್ನು ಪಡೆದ ಶರಣರೆಲ್ಲಾ ಈ ನಿಲವಿಗೇ ಏರಿದವರು. ಆ ಅನುಭಾವವನ್ನು ಹೇಳಿದ ಅವರ ಮಾತುಗಳಲ್ಲಿ ಒಂದೇ ಸತ್ಯದ ಪ್ರತಿಧ್ವನಿ ಕಾಣುತ್ತದೆ. 'ಸಾವ ಕೆಡುವ ಗಂಡರನೊಯ್ದು ಒಲೆಯೊಳಗೆ' ಇಕ್ಕಿ, ಸಾವಿಲ್ಲದ ಕೇಡಿಲ್ಲದ ಚಲುವಂಗೆ ಒಲಿದು, ಆ ತನ್ನ ಪ್ರಿಯನನ್ನು "ಚಿಲಿ ಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ, ನೀವು ಕಾಣಿರೇ" ಎಂದು ಮೊದಲಾಗಿ ಹಾಡಿ ಹುಡುಕಿ ಹಂಬಲಿಸಿದ ಅಕ್ಕ ಮಹಾದೇವಿಯೂ ತನ್ನ ಸತಿಪತಿ ಭಕ್ತಿಭಾವದ ಸಾಧನೆಯ ಕೊನೆಯಲ್ಲಿ ಅದೇ ಹಂತಕ್ಕೆ ಏರಿ ತಾನೇ ಆ ಪತಿಯಾಗಿ ಪರಿಣಮಿಸಿದ್ದಾಳೆ :

ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ?
ಚನ್ನಮಲ್ಲಿಕಾರ್ಜುನ ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ
ಮರೆದೆನಯ್ಯಾ.

ಘನವ ಕಂಡೆ, ಅನುವ ಕಂಡೆ, ಆಯತವ ಕಂಡೆ,
ಸ್ವಾಯತವ ಕಂಡೆ, ಸನ್ನಿಹಿತವ ಕಂಡೆ,
ಅರಿವನರಿದು ಮರಹ ಮರೆದೆ,
ಕುರುಹಿನ ಮೋಹದ ಮರವೆಯನೀಡಾಡಿದೆ
ಚನ್ನಮಲ್ಲಿಕಾರ್ಜುನಾ ನಿಮ್ಮನರಿದು ಸೀಮೆಗೆಟ್ಟೆನು.

ಸತಿಪತಿಭಾವದ ಉತ್ತುಂಗ ಶಿಖರವನ್ನು ಅಕ್ಕಮಹಾದೇವಿಯ ಈ ಧನ್ಯತೆಯ ಉದ್ಗಾರದಲ್ಲಿ ಕಾಣುತ್ತೇವೆ.

ಹೀಗೆ ಶರಣರ ಅನುಭಾವ ಮಾರ್ಗ, ಪೂರ್ಣ ಜೀವನದ ವಿಕಾಸಕ್ಕೆ ಸಂಕೇತವಾಗಿ ನಿಂತಿದೆ. ಬಹುಮುಖವಾದ ಜೀವನದ

ಎಲ್ಲ ಶಕ್ತಿಗಳ ಸುಂದರವಾದ ಸಮನ್ವಯು ಇಲ್ಲಿದೆ. ಮಾನಸಿಕ ಪ್ರಜ್ಞೆಯು ವಿಕಾಸದ ವಿವಿಧ ಹೆಜ್ಜೆಗಳನ್ನು ಅದು ಒಳಗೊಂಡಿದೆ. ಶರಣರು ಸಾಮಾಜಿಕ ವೈಷಮ್ಯಗಳ ಮಧ್ಯದಲ್ಲಿ ನಿಂತು ಹೋರಾಡಿದ ಸಾಧಕರೂ ಹೌದು ಮತ್ತು ಇದನ್ನು ಮಿಾರಿ ಮೇಲೇರಿ ತಮ್ಮ ಗುರಿಯೊಡನೆ ಸಮರಸಗೊಂಡ ಅನುಭಾವಿಗಳೂ ಹೌದು. ಈ ಎಲ್ಲ ಮಾನಸಿಕ ಪ್ರಜ್ಞೆಯು ವಿಕಾಸ ಅವರ ವಚನಗಳಲ್ಲಿ ಬೆಳೆದು ನಿಂತಿದೆ. ಇದನ್ನು ಸ್ಥೂಲವಾಗಿ 'ಲೌಕಿಕ ಪ್ರಜ್ಞೆ', 'ನಿರ್ಲಿಪ್ತ ಪ್ರಜ್ಞೆ' ಮತ್ತು 'ಸಮರಸ ಪ್ರಜ್ಞೆ' ಎಂದು ಮೂರು ಭಾಗಗಳಲ್ಲಿ ಗುರುತಿಸಬಹುದು. 'ಲೌಕಿಕ'ದಲ್ಲಿದ್ದು 'ನಿರ್ಲಿಪ್ತ'ರಾಗಿ 'ಸಮರಸ'ವನ್ನು ಪಡೆಯುವುದು ಸಾಧ್ಯವೆಂಬ ಈ ಮುಪ್ಪುರಿಗಳ ಸಮನ್ವಯು ಸೂತ್ರ ಇಲ್ಲಿ ಕಾಣುತ್ತದೆ. ಈ ದೃಷ್ಟಿಯಿಂದ ಶರಣ ಸಾಹಿತ್ಯದ ಆಳವಾದ ಅಭ್ಯಾಸ ಇಂದಿನ ಸಮಾಜದ ಮೇಲೂ ವಿಶೇಷವಾದ ಬೆಳಕನ್ನು ಬೀರಬಲ್ಲದು.

ಶರಣರ ಸ್ವತಂತ್ರ ವಿಚಾರ ಮನೋಧರ್ಮ, ಸರ್ವಸಮಾನತೆ, ವಿಚಾರ–ಆಚಾರಗಳ ಸಮನ್ವಯು, ಜ್ಞಾನ–ಭಕ್ತಿಗಳ ಸಾಮರಸ್ಯ– ಇವೆಲ್ಲವೂ ಇಂದಿನ ವಿಚಾರವಂತ ಯುಗಕ್ಕೆ ಹೆಚ್ಚಾಗಿ ಹಿಡಿಸುತ್ತವೆ. ಅವರು ಹಾಕಿಕೊಟ್ಟ ಆದರ್ಶಗಳು: "ಕಾಯಕವೇ ಕೈಲಾಸ", "ಸಕಲ ಜೀವರಿಗೆ ಲೇಸನು ಬಯಸುವವನೇ ಕುಲಜ" ಈ ಮೊದಲಾದುವು ಇಂದು ನಮಗೆ ಹೆಚ್ಚಾಗಿ ಪ್ರಿಯವಾಗುತ್ತವೆ. ಎಂಟುನೂರು ವರ್ಷಗಳ ಹಿಂದೆಯೇ ಶರಣರು ಇವುಗಳನ್ನು ಹೇಳಿದುದು ಮಾತ್ರವೇ ಅಲ್ಲ ಆಚರಣೆಗೆ ತಂದರು. ಕಾಯಕದ ಗೌರವವನ್ನು ಹೆಚ್ಚಿಸಿದರು. ಜಾತಿಬೇಧಗಳನ್ನು ತೊಡೆದು ಹಾಕಿದರು ಮತ್ತು ಅಸ್ಪೃಶ್ಯತೆಯ ವಿರುದ್ಧ ಬಹುಶಃ ಮೊಟ್ಟ ಮೊದಲನೆಯ ಸಾರಿ, ದೊಡ್ಡ ಹೋರಾಟವನ್ನು ಪ್ರಾರಂಭಿಸಿದರು.

ಸಾಮಾನ್ಯ ಜನತೆಯಲ್ಲೂ ದೈವತ್ವವನ್ನು ಜಾಗ್ರತಗೊಳಿಸಿ ಆಧ್ಯಾತ್ಮವೆಂಬ ಅಮೃತದ ಹೊಳೆಯನ್ನು ಕನ್ನಡನಾಡಿನಲ್ಲಿ ಹರಿಸಿದರು. ಮಾದಾರ ಚನ್ನಯ್ಯ, ಡೋಹಾರಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ ಮುಂತಾದ ನೂರಾರು ಶರಣರಲ್ಲದೆ ಸಾಮಾನ್ಯ ಮಹಿಳೆಯರು ಕೂಡಾ ತಮ್ಮ ನಿತ್ಯ ಕಾಯಕಗಳಲ್ಲಿದ್ದುಕೊಂಡೇ ಸಾಧಿಸಿದ ಆಧ್ಯಾತ್ಮಿಕ ನಿಲವನ್ನು ಗಮನಿಸಿದರೆ ಶರಣರ ಅನುಭಾವ ಮಾರ್ಗದ ಮಹತ್ವ ಅರಿವಾಗುತ್ತದೆ. ಧರ್ಮವು ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಜನತೆಯನ್ನುದ್ಧರಿಸುವ ಜೀವಂತಶಕ್ತಿಯಾಗಿ ಪರಿಣಮಿಸಿದುದು ಭರತ ಖಂಡದ ಧರ್ಮದ ಇತಿಹಾಸದಲ್ಲಿ ಬಹುಶಃ ಇನ್ನೆಲ್ಲಿಯೂ ಸಿಕ್ಕಲಾರದು. ಈ ದೃಷ್ಟಿಯಿಂದ ಶರಣಸಾಹಿತ್ಯದ ಅಭ್ಯಾಸ ಇಂದು ಹೆಚ್ಚು ಹೆಚ್ಚು ಆವಶ್ಯಕವಾಗಿ ಪರಿಣಮಿಸುತ್ತಿದೆ.

ಇದಲ್ಲದೆ ಕೇವಲ ಸಾಹಿತ್ಯದ ದೃಷ್ಟಿಯಿಂದಲೂ ವಚನ ಸಾಹಿತ್ಯದ ಸೌಂದರ್ಯ ಮಿಗಿಲಾದುದು; ಅನುಪಮವಾದುದು. ಅದುವರೆಗೂ ಕನ್ನಡದಲ್ಲಿ ಬೆಳೆದುಬಂದಿದ್ದ ಚಂಪೂ ಶೈಲಿಯನ್ನು ಸಡಿಲಗೊಳಿಸಿ ಸರಳವಾದ, ಸುಂದರವಾದ, ಶಕ್ತಿಯುತವಾದ, ಆಕರ್ಷಕವಾದ ಮತ್ತು ಪರಿಣಾಮಕಾರಿಯಾದ ಭಾಷೆಯ ರೂಪವೊಂದನ್ನು ರೂಪುಗೊಳಿಸಿಕೊಂಡರು ಶರಣರು. ಅವೇ ವಚನಗಳಾಗಿ ಪರಿಣಮಿಸಿದುವು.

ತಮ್ಮ ಭಾವನೆಗಳನ್ನೂ ಅನುಭವಗಳನ್ನೂ ಮನಮುಟ್ಟುವಂತೆ ಹೇಳುವುದಕ್ಕಾಗಿ ಅವರು ಬಳಸಿಕೊಳ್ಳುವ ಅಲಂಕಾರಗಳೂ, ಸಾದೃಶ್ಯಗಳೂ, ಉಕ್ತಿಚಾತುರ್ಯಗಳೂ ಅನೇಕ ವೇಳೆ ವಚನಗಳನ್ನು ಅತ್ಯುತ್ಕೃಷ್ಟ ಭಾವಗೀತೆಗಳ ಮಟ್ಟಕ್ಕೆ ಏರಿಸುತ್ತವೆ.

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,
ಅಂಬುಜಕೆ ಭಾನುವಿನ ಉದಯದ ಚಿಂತೆ,
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ,
ಎನಗೆ ನಮ್ಮ ಕೂಡಲ ಸಂಗಮದೇವರ ನೆನೆವುದೆ ಚಿಂತೆ.

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,
ಸುಳಿದು ಬೀಸುವ ವಾಯು ನಿಮ್ಮ ದಾನ,
ನಿಮ್ಮ ದಾನವಗುಂಡು ಅನ್ಯರ ಹೊಗಳುವ
ಕುನ್ನಿಗಳನೆಂಬೆ ರಾಮನಾಥ.

ಎಂಬಂತಹ ವಚನಗಳಲ್ಲಿ ಬರುವ, ಅರ್ಥಾಭಿವ್ಯಕ್ತಿಗೆ ಸಹಾಯಕವಾದ ಪ್ರಾಸ, ಒಳಪ್ರಾಸಗಳ ಸೊಬಗನ್ನಾಗಲೀ:

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನೆಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದಲಾನು ತುಂಬಿ

ಇಂತಹ ವಚನಗಳಲ್ಲಿ ಬರುವ ಸುಂದರ ಶ್ಲೇಷೆಯನ್ನಾಗಲೀ ಗಮನಿಸಿದಾಗ ಶಬ್ದಾಲಂಕಾರಗಳಲ್ಲಿಯೂ ವಚನಕಾರರು ಸಾಧಿಸಿರುವ ಸಹಜತೆ ಮನದಟ್ಟಾಗುತ್ತದೆ.

ಅವರಿಗೆ ಅಲಂಕಾರಗಳು ಬೇಕಾದುದು ಮಾತಿಗೆ ಮೀರಿದ ತಮ್ಮ ಅನುಭವವನ್ನು ಮಾತುಗಳಲ್ಲಿ ಹಿಡಿದಿಡುವುದಕ್ಕಾಗಿ. ಅವರು ಕೊಡುವ ಉಪಮಾನಗಳೂ, ರೂಪಕಗಳೂ, ಅವರು ಹೇಳುವ ಸಾದೃಶ್ಯಗಳೂ, ಹೋಲಿಕೆಗಳೂ ಓದುಗರ ಅನುಭವದ ಪರಿಧಿಯನ್ನು ವಿಸ್ತಾರಗೊಳಿಸುತ್ತವೆ. ಏಕೆಂದರೆ, ಅವರ ಜೀವನದ ಅನುಭವಸಂಪತ್ತಿನಿಂದ ಅವು ಮೂಡಿಬಂದಿವೆ. ಸುಂದರವಾದ ನೂರಾರು ಉದಾಹರಣೆಗಳಿಂದ ಈ ಮಾತನ್ನು ಸಮರ್ಥಿಸಬಹುದು. ಆದರೆ ಈ ಚಿಕ್ಕ ಲೇಖನದ ವ್ಯಾಪ್ತಿ ಅದಕ್ಕೆ ಸಹಾಯಕ

ವಾಗಿಲ್ಲ. ಓದುಗರಲ್ಲಿ ಆ ವಚನ ಸಾಹಿತ್ಯವನ್ನೇ ಓದಬೇಕೆಂಬ ಕುತೂಹಲವನ್ನು ಇದು ಉಂಟುಮಾಡಿದರೆ ಸಾಕು.

ಅಂತೂ ಶರಣರು ಕಂಡ ಉಚ್ಚ ಆಧ್ಯಾತ್ಮಿಕ ಆದರ್ಶಗಳು, ಅವರ ಜೀವನದರ್ಶನ, ನಡೆದ ಮಾರ್ಗ, ಏರಿದ ಎತ್ತರ, ತೋರಿಸಿದ ದಾರಿ—ಎಲ್ಲವೂ ಈ ವಚನಗಳೆಂಬ ಮುಕ್ತಕಗಳ ರೂಪದಲ್ಲಿ ಹೊರಹೊಮ್ಮಿವೆ. ಇಲ್ಲಿರುವ ಭಾಷೆ ಸರಳವಾದುದು, ಭಾವ ಉದಾತ್ತವಾದುದು. ದಿನದಿನದ ಬಳಕೆಯ ಮಾತುಗಳಿಂದ, ಸಾಮಾನ್ಯರೂ ಕಂಡಿರಬಹುದಾದ ನಿತ್ಯಜೀವನದ ಘಟನೆಗಳಿಂದ, ಸಾದೃಶ್ಯಗಳಿಂದ, ಉಪಮಾನಗಳಿಂದ, ಹೊಸ ಅನುಭವದ ಕಡೆಗೆ, ಹೊಸ ಜೀವನದ ಕಡೆಗೆ ಜನತೆಯನ್ನು ಎಚ್ಚರಿಸಿ ಮುನ್ನಡೆಸುವ ಅಮೃತವಾಣಿ ವಚನಗಳಲ್ಲಿ ಕಂಡುಬರುತ್ತದೆ.

ವಚನಗಳಲ್ಲಿ ಬರುವ ಸುಂದರವಾದ ಅನೇಕ ಉಕ್ತಿಗಳು ಜನ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಳ್ಳುವಂತಹ ಗಾದೆಯ ಮಾತುಗಳಾಗಿ ಪರಿಣಮಿಸಿವೆ. ಮೊಗೆದಷ್ಟೂ ಜಲವನ್ನು ಕೊಡುವ ಬತ್ತದ ಒರತೆಗಳಂತೆ, ಅಗೆದಷ್ಟೂ ಅರ್ಥವನ್ನು ಕೊಡುವ ಸೂತ್ರರೂಪವಾದ ಅನೇಕ ಮಾತುಗಳನ್ನು ಶರಣ ಸಾಹಿತ್ಯದಲ್ಲಿ ಕಾಣುತ್ತೇವೆ. ಉದಾಹರಣೆಗೆ ಕೆಲವನ್ನು ಮಾತ್ರ ನೋಡಬಹುದು:

"ಅರಿದೊಡೆ ಶರಣ, ಮರೆದೊಡೆ ಮಾನವ"
"ಇದ್ದು ಬದ್ಧನಲ್ಲ ಸುಳಿದು ಸೂತಕಿಯಲ್ಲ"
"ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ"
"ಒಲೆ ಹತ್ತಿ ಉರಿದೊಡೆ ನಿಲಬಹುದಲ್ಲದೆ, ಧರೆ ಹತ್ತಿ ಉರಿದೊಡೆ ನಿಲಬಹುದೇ?"
"ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದ ಮಾಬುದೆ?"

"ಕಾಯಕವೇ ಕೈಲಾಸ"
"ಗಾಳಿ ಹಡೆದಲ್ಲಿ ತೂರಿಕೊಳ್ಳಿರೇ"
"ತನು ಬತ್ತಲೆಯಾದಡೇನು ? ಮನ ಬತ್ತಲೆಯಾಗದನ್ನಕ್ಕ?"
"ತನ್ನ ತಾನರಿದೊಡೆ ತನ್ನರಿವೇ ಗುರು."
"ದೇವನೊಬ್ಬ ನಾಮ ಹಲವು"
"ನಂಬಿದರೆ ಪ್ರಸಾದ ನಂಬದಿದ್ದರೆ ವಿಷ."
"ಭಕ್ತಗೊಂದೇ ವಾಕ್ಯ ಬಾಳೆಗೊಂದೇ ಫಲ."
"ಮಾತೆಂಬುದು ಜ್ಯೋತಿರ್ಲಿಂಗ."
"ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ"

ಹೀಗೆ ಈ ಮಾತುಗಳ ಸಂಖ್ಯೆಯನ್ನು ಬೆಳಸಿಕೊಂಡು ಹೋಗಬಹುದು. ಶರಣರು, ಅಪಾರವಾದ ಅರ್ಥವನ್ನು ಅಡಕವಾದ ಮಾತುಗಳಲ್ಲಿ ಅಡಗಿಸಿದರು; ಭಾಷೆಯನ್ನು ಶಕ್ತಿಯುತವನ್ನಾಗಿ ಮಾಡಿದರು. ಉನ್ನತವಾದ ಮನೋಧರ್ಮದ ಮುದ್ರೆಯನ್ನು ಭಾಷೆಯ ಮೇಲೆ ಒತ್ತಿ ಅದನ್ನು ಶ್ರೀಮಂತವನ್ನಾಗಿ ಮಾಡಿದರು. ಅದರಿಂದ ಕನ್ನಡ ಸಾಹಿತ್ಯವಾಹಿನಿಯ ಒಂದು ಉಜ್ವಲ ಘಟ್ಟವಾಗಿ ಪರಿಣಮಿಸಿತು ೧೨ನೇ ಶತಮಾನದ ಶರಣರ ಅನುಭಾವ ಸಾಹಿತ್ಯ.

## ೩. ದಾಸ ಸಾಹಿತ್ಯ

'ದಾಸಸಾಹಿತ್ಯ' ಎಂದ ಕೂಡಲೇ ಪುರಂದರದಾಸರ ಹೆಸರು ಮೊಟ್ಟಮೊದಲು ಸುಳಿಯುತ್ತದೆ. ಹಾಗೆಯೇ ಕನಕದಾಸರು, ವಾದಿರಾಜರು ಈ ಮೂರು ಹೆಸರುಗಳು ದಾಸಸಾಹಿತ್ಯದಲ್ಲಿ ಬಹಳ ದೊಡ್ಡ ಹೆಸರುಗಳು. ಈ ಮೂವರೂ ಸುಮಾರು ೧೫ನೇ ಶತಮಾನದಲ್ಲಿಯೇ ಆಗಿ ಹೋದವರು, ಆದುದರಿಂದ

ದಾಸ ಸಾಹಿತ್ಯದ ಪ್ರಮುಖವಾದ ಯುಗ ೧೫ನೇ ಶತಮಾನವೆನ್ನಬಹುದು.

ಇದಕ್ಕೆ ಹಿಂದೆಯೇ ಶ್ರೀಪಾದರಾಯರು, ಶ್ರೀವ್ಯಾಸರಾಯರು ಮೊದಲಾದ ದಾಸರು ಆಗಿಹೋಗಿರುವುದನ್ನು ಕಾಣುತ್ತೇವೆ. ೧೭ ಮತ್ತು ೧೮ನೇ ಶತಮಾನಗಳಲ್ಲಿಯೂ ವಿಜಯದಾಸರು, ತಿಮ್ಮಣ್ಣ ದಾಸರು, ಪ್ರಸನ್ನವೆಂಕಟದಾಸರು, ಜಗನ್ನಾಥದಾಸರು—ಮೊದಲಾದವರು ಆಗಿಹೋಗಿದ್ದಾರೆ. ಇವರೆಲ್ಲರೂ ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತ ಸಿದ್ಧಾಂತವನ್ನೇ ಅನುಸರಿಸಿದವರಾದುದರಿಂದ ಆ ಸಿದ್ಧಾಂತಕ್ಕನುಗುಣವಾದ ರೀತಿಯಲ್ಲಿ ಅವರ ಅನುಭಾವ ಮಾರ್ಗ ಬೆಳೆದುನಿಂತಿದೆ.

ದ್ವೈತ ಸಿದ್ಧಾಂತದಲ್ಲಿ ಜೀವಾತ್ಮ ಪರಮಾತ್ಮರು ಬೇರೆ ಬೇರೆಯಾಗಿಯೇ ಇರತಕ್ಕವರು. ಈ ಕೆಳಗಿನ ಶ್ಲೋಕ ಮಧ್ವ ಮತದ ಸಾರವನ್ನು ಸಂಗ್ರಹವಾಗಿ ಹೇಳಿದೆ:

ಶ್ರೀಮನ್ಮಧ್ವಮತೇ ಹರಿಃ ಪರತರಸ್ಸತ್ಯಂ ಜಗತ್ತತ್ತ್ವತೋ
ಭೇದೋಜೀವಗಣಾ ಹರೇರನುಚರಾ, ನೀಚೋಚ್ಚಭಾವಂ ಗತಾಃ।
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋಹರಿಃ॥

'ಮಧ್ವಮತದಲ್ಲಿ ಹರಿಯೇ ಸರ್ವೋತ್ತಮ, ಜಗತ್ತು ಸತ್ಯ, ಭೇಧಗಳು ತತ್ವತಃ ನಿಜವಾದುವುಗಳು; ಜೀವಗಳು ಪರಮಾತ್ಮನ ವಶವರ್ತಿಗಳಾಗಿವೆ ಮತ್ತು ತಾರತಮ್ಯದಿಂದ ನೀಚೋಚ್ಚ ಭಾವಗಳನ್ನುಳ್ಳವಾಗಿವೆ. ನೈಜಸುಖದ ಅನುಭೂತಿಯೇ ಮುಕ್ತಿ. ಅಮಲವಾದ ಭಕ್ತಿಯೇ ಅದಕ್ಕೆ ಸಾಧನ. ಪ್ರತ್ಯಕ್ಷ, ಅನುಮಾನ, ಮತ್ತು ಶಬ್ದ ಇವೇ ಪ್ರಮಾಣಗಳು. ಅಖಿಲವೇದಗಳ ಸಹಾಯದಿಂದಲೇ ಹರಿಯು ಜ್ಞೇಯನು.'

ಇದಕ್ಕೆ ಅನುಗುಣವಾಗಿ ದಾಸರ ಭಕ್ತಿಪಂಥ ರೂಪುಗೊಂಡಿತು. ಅವರ ಸಾಕ್ಷಾತ್ಕಾರದ ಕೊನೆಯ ನಿಲವೂ ಇದನ್ನೇ ಅವಲಂಬಿಸಿ ಮೈದೋರಿತು.

ಸರ್ವೋತ್ತಮನಾದ ಹರಿಯನ್ನು ಸಾಕಾರರೂಪದಲ್ಲಿ ಮಾತ್ರವೇ ದಾಸರು ಕಾಣಬಲ್ಲರು. ದೈವಶಕ್ತಿಯನ್ನು ಸಾಕಾರಗೊಳಿಸಿ, ವಿವಿಧ ಮಾನವೀಯ ಸಂಬಂಧಗಳನ್ನು ಕಲ್ಪಿಸಿ, ಪ್ರೇಮಿಸಿ, ಆ ಭಕ್ತಿಯ ಆನಂದವನ್ನು ಭಕ್ತ ತಾನು ಬೇರೆಯಾಗಿಯೇ ನಿಂತು ಸವಿಯುವುದು, ಇದೇ ವೈಷ್ಣವ ಭಕ್ತಿಯ ಗುರಿ. ಬಂಗಾಳದ ಚೈತನ್ಯನಲ್ಲಾಗಲೀ, ಮಹಾರಾಷ್ಟ್ರದ ತುಕಾರಾಮನಲ್ಲಾಗಲೀ, ಹಾಗೆಯೇ ಕರ್ನಾಟಕದ ಪುರಂದರಾದಿ ದಾಸರಲ್ಲಿಯೂ ಈ ಬಗೆಯ ಸುಗುಣ ಉಪಾಸನೆಯನ್ನು ಕಾಣುತ್ತೇವೆ.

ಪರಾತ್ಪರಸ್ವರೂಪನಾದ ವಿಷ್ಣು ಇಲ್ಲಿ ರಾಮನಾಗಿ ಕೃಷ್ಣನಾಗಿ ಅವತರಿಸುತ್ತಾನೆ. ತನ್ನ ಲೀಲೆಯಿಂದ ಭಕ್ತರನ್ನು ಉದ್ಧರಿಸುತ್ತಾನೆ. ಒಮ್ಮೆ ಮಗನಂತೆ, ಒಮ್ಮೆ ಒಡೆಯನಂತೆ, ಒಮ್ಮೆ ಗೆಳೆಯನಂತೆ, ಒಮ್ಮೆ ಪತಿಯಂತೆ, ಭಕ್ತನು ದೇವರನ್ನು ಕಂಡು, ಒಮ್ಮೆ ತಾಯಾಗಿ 'ವಾತ್ಸಲ್ಯ ಭಕ್ತಿಯಿಂದ' ಒಮ್ಮೆ ಸೇವಕನಾಗಿ 'ದಾಸ್ಯ ಭಕ್ತಿ'ಯಿಂದ, ಒಮ್ಮೆ ಸ್ನೇಹಿತನಾಗಿ 'ಸಖ್ಯಭಕ್ತಿ'ಯಿಂದ, ಒಮ್ಮೆ ಸತಿಯಾಗಿ 'ಮಧುರ ಭಕ್ತಿ'ಯಿಂದ ಅವನನ್ನು ಉಪಾಸಿಸಿ 'ಶಾಂತಭಕ್ತಿ'ಯಿಂದ ಅವನ ಸ್ವರೂಪವನ್ನು ಕಂಡುಕೊಳ್ಳುತ್ತಾನೆ. ದಾಸರ ಸಾಧನೆಯ ಮಾರ್ಗದಲ್ಲಿ ಈ ಎಲ್ಲ ಭಾವಗಳನ್ನೂ ಕಾಣುತ್ತೇವೆ.

ಆಂಜನೇಯನ ದಾಸ್ಯಭಕ್ತಿ, ಅರ್ಜುನನ ಸಖ್ಯಭಕ್ತಿ, ಯಶೋಧೆಯ ವಾತ್ಸಲ್ಯಭಾವ, ರಾಧೆಯ ಮಧುರಭಕ್ತಿ ಇವುಗಳು ದಾಸರ ಆದರ್ಶಗಳಾಗಿವೆ :

ದಾಸನ್ನ ಮಾಡಿಕೋ ಎನ್ನ ಸ್ವಾಮಿ
ಸಾಸಿರ ನಾಮದ ವೆಂಕಟರಮಣ.

ಎಂದು ಸೇವಕನಂತೆ ಬೇಡಿಕೊಳ್ಳುವಾಗ,

ಪೋಗುವುದುಚಿತವೇ ಮಾಧವ ಮಧುರೆಗೆ
ಬಾಗುವೆ ಎಲೊ ನಿನಗೆ,
ನಾಗಶಯನ ನಿನ್ನನಗಲಿ ಒಂದುಕ್ಷಣ
ಹೇಗೆ ಸೈರಿಸುವೆವೋ ಮಾಧವ ಮುರಾಂತಕನೇ.

ಕೊಂಬು ಕೊಳಲನೂದುತ ನಂಬಿಸಿ ಪೋದನೆಯವ್ವ,
ಅಂಬುಜನಾಭಗೆ ಮನ ಹಂಬಲಿಸುತ್ತಿದೆಯವ್ವ;

ಎಂದು ಸತಿಯಾಗಿ ಅವನನ್ನು ಕುರಿತು ಹಂಬಲಿಸುವಾಗ,

ಕರುಣಾಕರ ನೀನೆಂಬುವುದ್ಯಾತಕೋ
ಭರವಸೆಯಿಲ್ಲನೆಗೆ...

ಇದು ನಿನಗೆ ಧರ್ಮವೇ ಇಂದಿರೇಶಾ,
ಬದಿಗ ನೀನಾಗಿದ್ದು ಭೀತಿಪಡಿಸುವುದು

ಎಂದು ಸ್ನೇಹಿತನಂತೆ ಅವನನ್ನು ಆಕ್ಷೇಪಿಸುವಾಗ,

ಎಂದಪ್ಪಿಕೊಂಬೆ ರಂಗಯ್ಯನ, ಎಂದಪ್ಪಿಕೊಂಬೆ,
ಎಂದಪ್ಪಿಕೊಂಬೆ ನಾ ಎಂದು ಮುದ್ದಾಡುವೇ,
ಎಂದಿಗೆ ಸವಿಮಾತು ಕೇಳಿ ನಾ ದಣಿವೆ !

ಪೋಗದಿರಲೊ ರಂಗ, ಬಾಗಿಲಿಂದಾಚೆಗೆ
ಭಾಗವತರು ಕಂಡರೆತ್ತಿಕೊಂಡೊಯ್ವರೋ.

ಎಂದು ಮಗನಂತೆ ವಾತ್ಸಲ್ಯಭಾವದಿಂದ ಅಪ್ಪಿ ಮುದ್ದಾಡುವಾಗ ಈ ಎಲ್ಲಾ ಭಾವಗಳೂ ವ್ಯಕ್ತವಾಗುತ್ತವೆ.

ಈ ವಿವಿಧ ಭಾವಗಳಿಂದ ಮತ್ತು ಶ್ರವಣ, ಕೀರ್ತನ, ಸ್ಮರಣ ಪಾದಸೇವನ—ಮೊದಲಾದ ನವ ವಿಧಗಳಿಂದ, ಏಕೈಕ ನಿಷ್ಠೆ, ಸರ್ವ ಸಮರ್ಪಣೆಗಳಿಂದ ದಾಸರ ಭಕ್ತಿಸಾಧನೆ ಬೆಳೆದು ಪೂರ್ಣ ಗೊಳ್ಳುತ್ತದೆ. ತಮ್ಮ ಇಷ್ಟದೇವತೆಯ ದರ್ಶನ ಲಭಿಸುತ್ತದೆ.

ಯಾರು ಯಾವ ರೂಪದಿಂದ ಆರಾಧಿಸುವರೋ ಅದೇ ಸಗುಣ ಸಾಕಾರರೂಪದಿಂದ ಆ ಮೂರ್ತಿ ಮೈದೋರುತ್ತದೆ. ದಾಸರ ದೈವತ್ವದ ಕಲ್ಪನೆ ಯಾವಾಗಲೂ ಲಕ್ಷ್ಮೀರಮಣ, ಪಕ್ಷಿವಾಹನ, ಪನ್ನಗಶಯನ—ಇತ್ಯಾದಿ ಸಗುಣ ಸಾಕಾರ ಸಮನ್ವಿತವೇ ಆಗಿರುತ್ತದೆ. ಶರಣರಂತೆ 'ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭು' ಎಂಬಂತಹ ನಿರಾಕಾರ ದೈವತ್ವದ ಕಲ್ಪನೆ ದಾಸಸಾಹಿತ್ಯದಲ್ಲಿ ಸಿಗುವುದಿಲ್ಲ. ಪೀತಾಂಬರ, ಮಾಣಿಕ್ಯಕಿರೀಟ, ಕೌಸ್ತುಭರತ್ನ ತುಲಸೀವನಮಾಲೆ, ಕಸ್ತೂರಿ ತಿಲಕಗಳಿಲ್ಲದೆ ದೇವನನ್ನು ಅವರು ಕಾಣಲಾರರು. ಆದುದರಿಂದ ಅವರ ಅನುಭವದ ಕೊನೆಯ ಹಂತದಲ್ಲಿಯೂ ಈ ಸಾಕಾರಮೂರ್ತಿಯ ವರ್ಣನೆಯನ್ನೇ ಕಾಣುತ್ತೇವೆ.

ರಂಗಯ್ಯ ಮನೆಗೆ ಬಂದರೆ ಅಂತ—
ರಂಗದಿ ಗುಡಿ ಕಟ್ಟಿ ಕುಣಿವೆನೋ
ಎಳೆ ತುಲಸಿಯ ವನಮಾಲೆಯು
ಹೊಳೆವ ನೀಲದ ವೈಢಾಳವು
ಪೊಳೆವ ಪಂಜರದ ಗಿಣಿಯಂತೆ ನಮ್ಮಂ—
ಗಳಕೆ ಬಂದ ಭಾಗ್ಯವ ನೋಡೆ.

ಎಂದು ಮುಂತಾಗಿ ಒಂದು ಕಡೆ ಹೇಳಿದರೆ ಇನ್ನೊಂದು ಕಡೆ

ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ ॥ಪಲ್ಲ॥
ಮಸ್ತಕದಲಿ ಮಾಣಿಕದ ಕಿರೀಟ
ಕಸ್ತೂರಿ ತಿಲಕದಿಂದೆಸೆವ ಲಲಾಟ,

ಹಸ್ತದಿಂ ಕೊಳಲನೂದುವ ಓರೆನೋಟ
ಕೌಸ್ತುಭ ಎಡಬಲದಲ್ಲಿ ಓಡ್ಯಾಟ ॥೧॥

ಮಘಮಘಿಸುವ ಸೊಬಗಿನ ಸುಳಿಗುರುಳು,
ಚಿಗುರು ತುಲಸಿ ವನಮಾಲೆಯ ಕೊರಳು,

ಬಗಬಗೆಯ ಹೊನ್ನುಂಗುರವಿಟ್ಟ ಬೆರಳು,
ಸೊಗಸಿನ ನಾಭಿಯು ತಾವರೆ ಅರಳು, ॥೨॥

ಉಡುದಾರ ಒಡ್ಯಾಣ ನಿಖಿಲಾಭರಣ,
ಬೆಡಗು ಪೀತಾಂಬರ ರವಿಶತಕಿರಣ,
ಕಡಗನೂಪುರ ಗೆಜ್ಜೆಗಳನಿಟ್ಟ ಚರಣ,
ಒಡೆಯ ಶ್ರೀಪುರಂದರ ವಿಠಲನ ಕರುಣ. ॥೩॥

ಹೀಗೆ ಬರುತ್ತದೆ ಅವರ ಸಾಕ್ಷಾತ್ಕಾರದ ವರ್ಣನೆ. ಪುರಂದರ ದಾಸರೇ ಇನ್ನೊಂದು ಕಡೆಯಲ್ಲಿ ತಮ್ಮ ಜೀವನದ ಧನ್ಯತೆಯ ಉದ್ಗಾರವನ್ನು ಹೀಗೆ ತೆಗೆದಿದ್ದಾರೆ:

ಬದುಕಿದೆನು, ಬದುಕಿದೆನು, ಭವಹಿಂಗಿತು, ॥ಪಲ್ಲ॥
ಪದುಮನಾಭನ ಪಾದದೊಲುಮೆ ಎನಗಾಯ್ತು ॥ಅನು. ಪ.॥

ಹರಿಯ ತೀರ್ಥ ಪ್ರಸಾದವಿಂದೆನಗೆ ದೊರಕಿತು
ಹರಿಕಥಾಮೃತವೆನ್ನ ಕಿವಿಯೊಳಾಯ್ತು,
ಹರಿದಾಸ ಸಂಘ ಬಂಧುಬಳಗಾಯ್ತು,
ಹರಿಮುದ್ರೆ ಎನಗೆ ಆಭರಣವಾಯ್ತು ॥೧॥

ಎಂದು ಮೊದಲಾಗಿ ಹಾಡಿದ್ದಾರೆ. ಈ ನಿಲವಿನಲ್ಲಿ ಅವರು ಹೇಳುವುದು:

ಯಾರು ಒಲಿದರೇನು ನಮಗಿನ್ನಾರು ಮುನಿದರೇನು ॥ಪ॥
ಕ್ಷೀರಸಾಗರಶಾಯಿಯಾದವನ ಸೇರಿದಂಥ ಹರಿದಾಸರಿಗೆ
॥ಅನು. ಪ.॥

ಊರನಾಳುವ ದೊರೆಗಳು ನಮ್ಮನು ದೂರ ಅಟ್ಟಿದರೇನು?
ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು?
ಮಾರೀ ಹಿಂಡು ಮಸಣದ ದಂಡು ಮೈಗೆ ಮುತ್ತಿದರೇನು?
ವಾರಿಜನಾಭನ ವಸುದೇವ ಸುತನ ಸಾರಿದಂಥ ಹರಿದಾಸರಿಗೆ

ಎಂದು ಈ ಪ್ರಪಂಚದ ಎಲ್ಲ ಬಂಧನಗಳಿಂದಲೂ ಅತೀತವಾದ ತಮ್ಮ ನಿಲವನ್ನು ಹೇಳಿದ್ದಾರೆ.

ವಿಜಯಂದಾಸರು ಮಾಡಿರುವ ಈ ಸಾಕ್ಷಾತ್ಕಾರದ ವರ್ಣನೆ ತುಂಬಾ ಸುಂದರವಾಗಿದೆ.

ಅಂತರಂಗದ ಕದವು ತೆರೆಯಿತಿಂದು ॥ಪ॥
ಇಂತು ಪುಣ್ಯದ ಫಲದ ಪ್ರಾಪ್ತಿ ಫಲಿಸಿತೆನಗೆ ॥ಅನು. ಪ.॥

ಏಸು ದಿನವಾಯಿತೋ ಬೀಗ ಮುದ್ರೆಯ ಮಾಡಿ
ವಾಸವಾಗಿದ್ದರೋ ದುರುಳರಲ್ಲಿ.
ಮೋಸಹೋಯಿತು ಇಂತು ಇಂದಿನ ತನಕ,
ಸೂಸು ತಮಸಿನಲಿ ಮುಳುಗಿ ಕಾಣುತಿದ್ದಿಲ್ಲಾ ॥೧॥

ಹರಿಕರುಣವೆಂಬಂಥ ಕೀಲಿಕೈ ದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ
ಪರಮಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದ ಬೀಗವ ನಾ ತೆರೆದೇ ॥೨॥

ಸುತ್ತಿಲಿದ್ದವರೆಲ್ಲಾ ಪಲಾಯನವಾದರೋ
ಆಪ್ತನುಡಿ ಜ್ಞಾನವೆಂಬ ದೀಪವನ್ನು
ಜತ್ತಾಗಿ ಹಿಡಿಕೊಂಡು ದ್ವಾರವನ್ನು ಪೋಗಲು
ಎತ್ತ ನೋಡಿದೊಡತ್ತ ಶೃಂಗಾರ ಸದನಾ ॥೩॥

ಹೊರಗೆ ದ್ವಾರವು ನಾಲ್ಕು, ಒಳಗೈದು ದ್ವಾರಗಳು
ಒಳದಾರಿಯೊಳು ಪ್ರಾಣಾದಿ ಪ್ರಿಯರು
ಮಿರುಗುವ ಮಧ್ಯಮಂಟಪ ಕೋಟಿರವಿಯಂತೆ
ಸರಸಿಜನಾಭನ ಅರಮನೆಯ ಸೊಬಗೂ ॥೪॥

ಸ್ವಮೂರ್ತಿ ಗಣಮಧ್ಯ ಸಚ್ಚಿದಾನಂದೈಕ
ರಮಾದ್ಯರಿಂದೋಲಾಡಿ ಆಲಿಂಗನದಲಿ
ಕಮಲಜಾದಿಗಳಿಂದ ಸ್ತುತಿಸಿಕೊಳುತಲಿ ಹೃದಯ
ಕಮಲದೊಳಗಿರುವ ವಿಜಯ ವಿಠಲನ ಕಂಡೇ ॥೫॥

ತುಂಬಾ ಅರ್ಥವತ್ತಾಗಿ, ಧ್ವನಿಪೂರ್ವಕವಾಗಿ ಭಾವಗೀತೆಯಂತಿದೆ ಹಾಡು. ತುಳಸಿ, ಕೌಸ್ತುಭ ಪೀತಾಂಬರಗಳನ್ನು ದಾಟಿ ಅಂತ ರಂಗದ ಕದವನ್ನು ತೆರೆದು ಒಳಹೊಕ್ಕಿದ್ದಾನೆ ಇಲ್ಲಿ ಭಕ್ತ. ಆದರೆ

ಅಲ್ಲಿಯೂ ಆತನಿಗೆ ಗೋಚರಿಸುವುದು ರಮೆಯನ್ನು ಅಪ್ಪಿ ಕೊಂಡಿರುವ, ಬ್ರಹ್ಮನಿಂದ ಹೊಗಳಿಸಿಕೊಳ್ಳುವ ಮೂರ್ತಿಯೇ. ಏಕೆಂದರೆ ಆ ರೂಪದಲ್ಲಿಯೇ ಅವರು ದೇವನನ್ನು ಕಾಣಲು ಸಾಹಸಪಟ್ಟವರು. ಯಾರು ಯಾವ ರೂಪದಿಂದ ಭಜಿಸುತ್ತಾರೊ ಆ ರೂಪದಿಂದಲೇ ತಾನು ಕಾಣಿಸಿಕೊಳ್ಳುವುದಾಗಿ ಕೃಷ್ಣ ಹೇಳಿಲ್ಲವೇ ಗೀತೆಯಲ್ಲಿ.

ದಾಸರು ವರ್ಣಿಸಿದ ಮುಕ್ತಿಸ್ಥಿತಿ ಅವರು ಅವಲಂಬಿಸಿದ ದ್ವೈತ ಸಿದ್ಧಾಂತಕ್ಕೆ ಅನುಗುಣವಾಗಿದೆ. “ ಜಡ, ಜೀವ, ಈಶ್ವರ—ಇವುಗಳಲ್ಲಿ ಅತ್ಯಂತ ಪಾರಮಾರ್ಥಿಕ ಬೇಧವಿದೆ, ಮತ್ತು ಅದು ಮುಕ್ತಿಸ್ಥಿತಿಯಲ್ಲಿಯೂ ಹಾಗೇ ಇರುವುದು ” ಎನ್ನುತ್ತಾರೆ ದಾಸರು. ವಾದಿರಾಜರು ಮುಕ್ತನ ಲಕ್ಷಣವನ್ನೂ ಚತುರ್ವಿಧ ಮುಕ್ತಿಗಳನ್ನೂ ಹೀಗೆ ವರ್ಣಿಸಿದ್ದಾರೆ: ಮುಕ್ತರು ಶಿರದಲ್ಲಿ ಮುಕುಟ, ಮೈಯಲ್ಲಿ ಅಂಗಿ, ಪೀತಾಂಬರ; ಕೊರಳಲ್ಲಿ ಹಾರ ಪದಕ, ಕೈಯ್ಯಲ್ಲಿ ಕಂಕಣ, ಮೊದಲಾದ ಥಳಥಳಿಸುವ ವಸ್ತು ಒಡವೆಗಳನ್ನು ಹಾಕಿಕೊಂಡು ಕಾಂತಿಯಿಂದ ಹೊಳೆಯುವರು. ಇವರಿಗೆ ನಾಲ್ಕು ಬಾಹುಗಳು, ಅವು ಶಂಖ ಚಕ್ರಾದಿ ಆಯುಧಗಳಿಂದ ಶೋಭಿಸುವುವು. ಶ್ರೀವತ್ಸ, ಕೌಸ್ತುಭಮಣಿಗಳು ಮಾತ್ರ ಈ ಮುಕ್ತರಲ್ಲಿ ಇರುವುದಿಲ್ಲ. ಅವು ವಿಷ್ಣುವಿನಲ್ಲಿ ಮಾತ್ರ ಇರತಕ್ಕವು. ಮುಕ್ತಿಸ್ಥಿತಿಯಲ್ಲಿಯೂ ಜೀವರು ಹರಿಯಿಂದ ಭಿನ್ನರಾಗಿಯೇ ಇರುತ್ತಾರೆ. ಅವರು ಮಾಡುವ ಸೇವೆಯ ಲಕ್ಷಣಗಳಿಂದಲೇ ಭಿನ್ನತೆಯನ್ನು ಕಂಡುಕೊಳ್ಳಬಹುದು.

ಮುಕ್ತಿಯಲ್ಲಿ ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ—ಎಂದು ನಾಲ್ಕು ಬಗೆಯುಂಟು. ಸಾಯುಜ್ಯಮುಕ್ತಿ ಸುರರಿಗೆ. ಹರಿಯ ಅಂಗದಲ್ಲಿ ಅವರ ವಾಸ. ಸಾಲೋಕ್ಯ ಮುಕ್ತರು ಹರಿಯ ಲೋಕದಲ್ಲಿ ವಾಸಮಾಡುವವರು. ಹರಿಯ ಲೋಕದ

ಸುತ್ತ ಇರುವ ಕ್ಷೀರಸಾಗರದಲ್ಲಿ ವಾಸಮಾಡುವ ಮುಕ್ತಿ, ಸಾಮೀಪ್ಯಮುಕ್ತಿ. ಶ್ರೀವತ್ಸ ಕೌಸ್ತುಭಗಳನ್ನುಳಿದು ಉಳಿದೆಲ್ಲ ವಿಷಯಗಳಲ್ಲಿಯೂ ಶ್ರೀ ಹರಿಯ ರೂಪವನ್ನೇ ಪಡೆಯುವ ಮುಕ್ತಿ, ಸಾರೂಪ್ಯಮುಕ್ತಿ. ಈ 'ಸಾರೂಪ್ಯ' ಎಲ್ಲ ಮುಕ್ತರಿಗೂ ಉಂಟು. ಆದರೂ ಇದೊಂದು ಬೇರೆ ಮುಕ್ತಿಯೆಂದು ಹೇಳುವಲ್ಲಿ ವಿಶೇಷವೇನೆಂದರೆ ಉಳಿದ ಮುಕ್ತರಿಗೆ ಸಾಯುಜ್ಯಾದಿಗಳಿದ್ದು ಸಾರೂಪ್ಯವೂ ಉಂಟು. ಇವರಿಗೆ ಸಾರೂಪ್ಯ ಮಾತ್ರ ಉಂಟು —ಇದು ದಾಸರ ಮುಕ್ತಿಯ ಕಲ್ಪನೆ.

ಇದರ ಸಾತ್ವಿಕ ಸ್ವರೂಪ ಇಂದಿನ ವಿಚಾರವಂತ ಲೋಕಕ್ಕೆ ಎಷ್ಟರಮಟ್ಟಿಗೆ ಹಿಡಿಸೀತೊ ಹೇಳುವುದು ಕಷ್ಟ. ಆದರೂ ಇದರ ಹಿಂದಿರುವ ನೈತಿಕ ಜೀವನದ ಉದಾತ್ತವಾದ ಕಲ್ಪನೆ, ಸಮಾಜಕ್ಕೆ ಎಂದೆಂದಿಗೂ ಆವಶ್ಯಕವಾದುದು. ಅಂದು ಕೂಡ ದಾಸರ ಕೀರ್ತನೆಗಳಿಂದ ಸಮಾಜದಮೇಲೆ ಆದ ಪ್ರಭಾವ ಬಹಳ ಹಿರಿದಾದುದು. ಸರಳವಾದ, ಸುಂದರವಾದ ಕೀರ್ತನೆಗಳಲ್ಲಿ ಮನೆ ಮನೆಗೆ ಜ್ಞಾನದ ಬೆಳಕನ್ನು ಬೀರಿದರು ದಾಸರು. ಸಾಹಿತ್ಯದ ಜೊತೆಗೆ ಸಂಗೀತದ ಪ್ರಭಾವವನ್ನು ಆಧ್ಯಾತ್ಮಿಕ ಸಾಧನೆಗೆ ಬಳಸಿಕೊಂಡರು. ದಾಸಸಾಹಿತ್ಯಕ್ಕೆ ಅದರಲ್ಲಿಯೂ ಮುಖ್ಯವಾಗಿ ಪುರಂದರದಾಸರಿಗೆ ಸಂಗೀತದ ದೃಷ್ಟಿಯಿಂದಲೂ ಬಹಳ ಪ್ರಮುಖವಾದ ಸ್ಥಾನವಿದೆ.

ಸಾಹಿತ್ಯವಾಗಲೀ, ಸಂಗೀತವಾಗಲೀ ಶರಣರಂತೆಯೇ ದಾಸರಿಗೂ ಜೀವನವನ್ನು ಹಸನುಗೊಳಿಸುವುದಕ್ಕಾಗಿ ಮಾತ್ರ ಬೇಕಾಗಿತ್ತು. ಆ ಕೆಲಸವನ್ನು ಅವು ಪರಿಣಾಮಕಾರಿಯಾಗಿ ಸಾಧಿಸಿದುವು. ತಮ್ಮ ಸಾಧನೆಯಲ್ಲಿ ತೋರಿದ ಸಮಸ್ಯೆಗಳನ್ನೂ, ಪ್ರಾರಂಭದ ಮನಸ್ಸಿನ ತಳಮಳವನ್ನೂ ಆರ್ತಭಾವವನ್ನೂ

ಸುಂದರವಾದ ಕೀರ್ತನೆಗಳ ಮೂಲಕ ಹೊರಹೊಮ್ಮಿಸಿದರು. ಅವುಗಳನ್ನು ಮೆಟ್ಟಿ ಮೇಲೇರತಕ್ಕಂತಹ ನೈತಿಕ ಜೀವನದ ಸರಳ ಮಾರ್ಗವನ್ನು ಸೂಚಿಸಿದರು. ಒಂದೆರಡು ಉದಾಹರಣೆಗಳನ್ನು ಮಾತ್ರ ನೋಡುವುದರಲ್ಲಿಯೇ ತೃಪ್ತರಾಗಬೇಕಾಗಿದೆ:

ಬಿನ್ನಹಕೆ ಬಾಯಿಲ್ಲವಯ್ಯ
ಅನಂತ ಅಪರಾಧ ಎನ್ನೊಳಗೆ ಇರಲಾಗಿ

ಎಂಬ ಈ ಹಾಡನ್ನು ಕೇಳದವರಾರು! ಇದನ್ನು ಅರ್ಥವರಿತು ಹಾಡಿದಾಗ ಹೇಳುವವರ ಮತ್ತು ಕೇಳುವವರ ಮನಸ್ಸು ಕ್ಷಣ ಕಾಲವಾದರೂ ಅಂತರ್ಮುಖವಾಗುತ್ತದೆ.

ಯಾರಿಗೆ ಯಾರುಂಟು ಎರವಿನ ಸಂಸಾರ
ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೇ

ಎಂಬ ಕೀರ್ತನೆಯಲ್ಲಿ ಮನುಷ್ಯಜೀವನದ ನಿಸ್ಸಹಾಯಕತೆ, ದೈವ ಕೃಪೆಯ ಹಾರೈಕೆ ಎರಡೂ ಸುಂದರವಾಗಿ, ಅರ್ಥಗರ್ಭಿತವಾಗಿ ವ್ಯಕ್ತವಾಗಿದೆ. ಜೀವನ ನಿಸ್ಸಹಾಯಕವೆಂದ ಮಾತ್ರಕ್ಕೆ ದುಃಖಿತನಾಗಿ ಗೋಳಾಡುತ್ತಿರಬೇಕಾಗಿಲ್ಲ. ದೈವಕೃಪೆಯನ್ನು ನಂಬಿ, ಸರ್ವವನ್ನು ಆತನಿಗೆ ಒಪ್ಪಿಸಿ 'ಈಸಬೇಕು ಇದ್ದು ಜೈಸಬೇಕು' ಎಂಬ ನಿಷ್ಠೆ ಯಿಂದ ಮುಂದುವರಿಯಬೇಕೆಂದು ಬೋಧಿಸುತ್ತಾರೆ ದಾಸರು.

ಜಗತ್ತಿನ ರೀತಿ ನೀತಿಗಳನ್ನೂ, ಸಾಧಕನಿಗೆ ಅವಶ್ಯಕವಾದ ಗುಣ ಕರ್ಮಗಳನ್ನೂ ಕುರಿತು ದಾಸರು ಹೇಳಿರುವ ಮಾತುಗಳು ಮನನಮಾಡಬೇಕಾದುವು:

ಕಾಡ ಬೆಳುದಿಂಗಳು ಈ ಸಂಸಾರ, ಕತ್ತಳೆ ಬೆಳದಿಂಗುಳು ॥ಪಲ್ಲ॥
ಉಂಟಾದ ಕಾಲಕ್ಕೆ ನೆಂಟರು ಇಷ್ಟರು
ಬಂಟರಾಗಿ ಬಂದು ಬಾಗಿಲ ಕಾಯ್ವರು,
ಉಂಟಾದ ದಿನ ತಪ್ಪಿ ಬಡತನ ಬಂದರೆ

ಒಂಟಿ ಹಾಗೆ ಕತ್ತ ಮೇಲಕೆತ್ತುವರು.
ಶಕ್ತನಾದರೆ ನೆಂಟರೆಲ್ಲ ಹಿತರು, ಅ—
ಶಕ್ತನಾದರೆ ಆಪ್ತಜನರೆ ವೈರಿಗಳು॥

ಈ ಮುಂತಾದ ಮಾತುಗಳಲ್ಲಿ ಸಾಮಾನ್ಯವಾಗಿ ಕಾಣುವ ಲೋಕದ ಸ್ವಾರ್ಥನೀತಿಯನ್ನು ತಿಳಿಸುತ್ತಾರೆ. ಇಂತಹ ಲೋಕದಲ್ಲಿ ಹೇಗೆ ಬಾಳಬೇಕು :

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ
ಪದುಮನಾಭನ ಪಾದ ಭಜನೆ ಸುಖವಯ್ಯ ॥ಪಲ್ಲ॥
ಕಲ್ಲಾಗಿರಲು ಬೇಕು ಕಠಿಣ ಭವ ತೊರೆಯೊಳಗೆ
ಬಿಲ್ಲಾಗಿರಲು ಬೇಕು ಬಲ್ಲವರೊಳಗೆ
ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು
ಬೆಲ್ಲವಾಗಲು ಬೇಕು ಬಂಧು ಜನರೊಳಗೆ

ಎಂದು ಮುಂತಾಗಿ ಹೇಳುವ ಮಾತು ಸುಂದರವಾಗಿವೆ. "ಸ್ನಾನವ ಮಾಡಿರೋ ಜ್ಞಾನ ತೀರ್ಥದಲಿ। ನಾನು ನೀನೆಂಬ ಅಹಂಕಾರವ ಬಿಟ್ಟು॥" "ಧರ್ಮವೇ ಜಯವೆಂಬ ದಿವ್ಯ ಮಂತ್ರ। ಮರ್ಮವನು ತಿಳಿದು ಆಚರಿಸುವುದು ಕೇಳು॥", "ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ। ಸುಜ್ಞಾನಿಗಳ ಕೂಡ ಜಗಳವೇ ಲೇಸು॥", "ಮನವ ಶೋಧಿಸಬೇಕು ನಿಚ್ಚಾ, ದಿನ। ದಿನದಿ ಮಾಡುವ ಪಾಪ ಪುಣ್ಯದ ವೆಚ್ಚಾ॥", "ತಾಳುವಿಕೆಗಿಂತನ್ಯ ತಪವು ಇಲ್ಲ। ಕೇಳಬಲ್ಲವರಿಗೆ ಹೇಳುವೆನು ಸೊಲ್ಲಾ॥", "ಹೊಲೆಯ ಹೊರಗಿಹನೆ ಊರೊಳಗಿಲ್ಲವೇ॥", "ಕುಲ ಕುಲವೆನ್ನುತಿಹರೋ। ಕುಲ ಯಾವುದು ಸತ್ಯಸಜ್ಜನರಿಗೆ॥",—ಇಂತಹ ನೂರಾರು ಕೀರ್ತನೆಗಳು ಜನತೆಯ ನೈತಿಕ ಜೀವನವನ್ನು ರೂಪುಗೊಳಿಸುವ ದಿವ್ಯ ಶಕ್ತಿಯಿಂದ ಕಂಗೊಳಿಸುತ್ತಿವೆ.

ಶರಣ ಸಾಹಿತ್ಯದಲ್ಲಿ ಕಂಡಂತೆ ದಾಸಸಾಹಿತ್ಯದಲ್ಲಿ ಬಂದಿರುವ

ಅನೇಕ ಮಾತುಗಳು ಸುಭಾಷಿತಗಳಾಗಿ ಜನಜೀವನದಲ್ಲಿ ಸೇರಿಕೊಂಡುಹೋಗಿವೆ. ಅಂತಹ ಒಂದೆರಡನ್ನು ಮಾತ್ರ ಇಲ್ಲಿ ನೋಡಬಹುದು: "ಅಟ್ಟ ಮೇಲೆ ಒಲೆ ಉರಿವಂತೆ", "ಅಳಿವುದು ಕಾಯ, ಉಳಿವುದೊಂದೇ ಕೀರ್ತಿ", "ಆಕಳು ಡೊಂಕು ಆದರೆ ಹಾಲು ಡೊಂಕೇ", "ಕತ್ತೆ ಬಲ್ಲುದೇ ಹೊತ್ತ ಕಸ್ತೂರಿಯ ಪರಿಮಳವ", "ಕಿಚ್ಚಿಗೆ ಇರುವೆ ಮುತ್ತುವುದೇ", "ಕೈಮಿಾರಿ ಹೋದುದ್ದೇ ಕೃಷ್ಣಾರ್ಪಣ", "ವಿಷವನುಣಿಸಿದವನಿಗೆ ಷಡ್ರಸವನುಣಿಸಲು ಬೇಕು."

ಒಟ್ಟಿನಲ್ಲಿ ದಾಸಸಾಹಿತ್ಯ ವಿಸ್ತಾರದಿಂದಲೂ ಗುಣದಿಂದಲೂ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆಯಲು ಅರ್ಹವಾಗಿದೆ. ಮಾನವ ಜೀವನದ ಮಹೋದ್ದೇಶವನ್ನು ಸರಳವಾದ ಸುಂದರವಾದ, ನಾದಸಮನ್ವಿತವಾದ ಕೀರ್ತನೆಗಳಲ್ಲಿ ರೂಪಿಸಿದ ದಾಸರು ಕನ್ನಡ ಜನಕೋಟಿಯ ಹೃದಯದಲ್ಲಿ ನಿರಂತರವಾಗಿ ನೆಲಸಿದ್ದಾರೆ.

## ೪. ತತ್ತ್ವಸಾಹಿತ್ಯ

ದಾಸಸಾಹಿತ್ಯ ಅತಿ ಹೆಚ್ಚಾಗಿ ಸೃಷ್ಟಿಯಾದ ಕಾಲದಲ್ಲಿಯೇ, ಅಂದರೆ ಸುಮಾರು ೧೫ನೇ ಶತಮಾನ ಅಥವಾ ಅದಕ್ಕಿಂತ ಸ್ವಲ್ಪ ಪೂರ್ವದಲ್ಲಿ ನಿಜಗುಣಶಿವಯೋಗಿ ಎಂಬ ಒಬ್ಬ ಮಹಾ ಅನುಭಾವಿ ಕನ್ನಡದಲ್ಲಿ ಆಗಿಹೋಗಿದ್ದಾರೆ. ನಿಜಗುಣರು ಎನ್ನುವ ಹೆಸರು ಕನ್ನಡ ಸಾಹಿತ್ಯದಲ್ಲಿ ಬಹಳ ಮಹತ್ವಪೂರ್ಣವಾದ ಹೆಸರು. ಆಧ್ಯಾತ್ಮಿಕ ಸಾಧನೆಯ ರಂಗದಲ್ಲಿಯಂತೂ ಅದ್ವಿತೀಯವಾದುದು. ಅವರ 'ಕೈವಲ್ಯ ಪದ್ಧತಿ', 'ಪರಮಾನುಭವ

ಬೋಧೆ', 'ಪರಮಾರ್ಥ ಗೀತೆ', 'ಅನುಭವಸಾರ'—ಈ ಕೃತಿಗಳು ಅವರ ಸಾಧನೆಗೆ ಸಾಕ್ಷಿಗಳಾಗಿ ನಿಂತಿವೆ. ಇವಲ್ಲದೆ 'ಪಾರಮಾರ್ಥ ಪ್ರಕಾಶಿಕೆ' ಮತ್ತು 'ವಿವೇಕ ಚಿಂತಾಮಣಿ' ಎಂಬ ಎರಡು ಗದ್ಯಗ್ರಂಥಗಳನ್ನು ರಚಿಸಿದ್ದಾರೆ. ವಿವೇಕ ಚಿಂತಾಮಣಿಯಂತೂ ಕನ್ನಡದಲ್ಲಿ ಮೊಟ್ಟಮೊದಲನೆಯ ವಿಶ್ವಕೋಶವೆನ್ನಬಹುದು. ತಮ್ಮ ಕಾಲದವರೆಗೆ ಬೆಳೆದುಬಂದ ಜ್ಞಾನದ ಎಲ್ಲ ಮುಖಗಳನ್ನೂ ಈ ಒಬ್ಬ ವ್ಯಕ್ತಿ ಹಿಡಿದು ಅರಗಿಸಿಕೊಂಡು ಅದನ್ನು ಕನ್ನಡದ ಈ ಗದ್ಯಗ್ರಂಥದಲ್ಲಿ ಕೊಟ್ಟಿರುವುದು ಕನ್ನಡಿಗರು ಹೆಮ್ಮೆಪಡಬೇಕಾದ ವಿಷಯ.

ಅವರ ಕೃತಿಗಳಲ್ಲೆಲ್ಲಾ ಕೈವಲ್ಯಪದ್ಧತಿಯೆಂಬುದು ಒಂದು ರೀತಿಯಲ್ಲಿ ವಿಶಿಷ್ಟವಾದ ಗ್ರಂಥ. ಇದು ರಾಗ ಸಮನ್ವಿತವಾದ ಗೀತೆಗಳಿಂದ ಅಥವಾ ತತ್ತ್ವಪದಗಳಿಂದ ಕೂಡಿದೆ. ಶಿವಕಾರುಣ್ಯಸ್ಥಲ ಜೀವಸಂಬೋಧನ ಸ್ಥಲ, ನೀತಿಕ್ರಿಯಾಚಾರ ಸ್ಥಲ—ಎಂದು ಮುಂತಾಗಿ ಸ್ಥಲಗಳನ್ನಾಗಿ ವಿಂಗಡಿಸಿದ್ದಾರೆ. ಒಂದೊಂದು ಸ್ಥಲದಲ್ಲೂ ಅನುಭಾವಪೂರ್ವಕವಾದ ಹಾಡುಗಳಿವೆ. ಇವುಗಳನ್ನು ಕೀರ್ತನೆಗಳೆನ್ನುವುದಕ್ಕಿಂತ 'ತತ್ತ್ವಪದ'ಗಳೆನ್ನುವುದೇ ರೂಢಿಗೆ ಬಂದಿದೆ. ಇವು ಚಿರಂತನವಾದ ಆಧ್ಯಾತ್ಮಿಕ ತತ್ತ್ವಗಳನ್ನು ಕುರಿತು ಹಾಡಿದುವುಗಳಾದುದರಿಂದ ಇವುಗಳಿಗೆ ಬಹುಶಃ ಆ ಹೆಸರು ಬಂದಿತೇನೋ. ಅಂತೂ ಈ ತತ್ತ್ವಪದಗಳ ಪರಂಪರೆ ಕನ್ನಡದಲ್ಲಿ ನಿಜಗುಣರ ಅನಂತರ ಬೆಳೆದು ಬಂದಂತೆ ತೋರುತ್ತದೆ. ಮುಪ್ಪಿನ ಷಡಕ್ಷರಿಗಳು, ಸರ್ಪಭೂಷಣರು, ಬಾಲಲೀಲಾ ಮಹಾಂತ ಶಿವಯೋಗಿಗಳು, ಶಿಶುನಾಳಷರೀಫ್ ಸಾಹೇಬರು, ನಿರುಪಾದಿ ಸಿದ್ಧ, ಚಿದಾನಂದ, ಶಂಕರಾನಂದ—ಈ ಮೊದಲಾದ ಅನೇಕರನ್ನು ಹೆಸರಿಸಬಹುದು. ಅವರಲ್ಲಿ ಒಬ್ಬಿಬ್ಬರನ್ನು ತೆಗೆದು

ಕೊಂಡು ಅವರ ಒಂದೆರಡು ರಚನೆಗಳನ್ನು ಮಾದರಿಗಾಗಿ ನೋಡ ಬಹುದು.

ನಿಜಗುಣರು ಕಾಲದ ದೃಷ್ಟಿಯಿಂದ ಮಾತ್ರವೇ ಅಲ್ಲ, ಗುಣದ ದೃಷ್ಟಿಯಿಂದಲೂ ತತ್ತ್ವಪದಗಳ ಪರಂಪರೆಯ ಆದ್ಯಪ್ರವರ್ತಕ ರೆನ್ನಬಹುದು.

ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ ॥ಪ॥

ದುರಿತ ಕರ್ಮವನೊಲ್ಲದಿರು ಪುಣ್ಯವನೆ ಮಾಡು।
ಹರನಡಿವಿಡಿ ಶಾಂತರೊಡನಾಡು॥
ಕರುಣವಿರಲಿ ಜೀವರೊಳು, ನೀತಿವಿದನಾಗು।
ಪೊರೆ ಪೊರ್ದಿದರನೆಂದು ಬೆಸಸುವ॥ ॥೧॥

ನಿಂದಿಸಿ ನುಡಿಯದಿರಾರನು, ಮನಸಿಗೆ।
ಬಂದಂತೆ ನಡೆಯದಿರಿಹದಲ್ಲಿ
ಕುಂದುವಡೆಯದಿರು ಕಾಮಾದಿಗಳನು, ಜಯಿ।
ಸೆಂದು ಕೈಹಿಡಿದನುಗ್ರಹಿಸುವ ॥೨॥

ಭವಮಾಲೆಗಲಸು, ಪುಸಿಯದಿರೆಡುರು ಬಂದು।
ಕವಿಯಲಂಜದಿರು, ಸಂಪದದೊಳು
ತವೆಮದವಳಿದಿರು, ತತ್ತ್ವ ಸಂತತಿಯನು।
ವಿವರಿಸಿ ನೋಡೆಂದು ತಿಳುಪುವ ॥೩॥

ಬಳಸದಿರದ್ವೈತವನು ಬಾಹ್ಯದಲ್ಲಿ, ನಿ।
ನ್ನೊಳಗೇಕೋ ಭಾವನೆಯೊಡಗೊಡು
ತಿಳಿದು ಸಮಯ ನಿಷ್ಠೆಗಲಿ, ವೇದವಿಧ ಭಕ್ತಿ।
ಗಳನಗಲದಿರೆಂದುಸುರುವ ॥೪॥

ಆರು ನಾನೆಂದು ವಿಚಾರಿಸು, ವಿಷಮ ಸಂ।
ಸಾರವಿದನು ಕನಸೆಂದರಿ
ಮಾರ ಮರ್ಧನ ಶಂಭುಲಿಂಗವನೊಲಿಸಿ ಗಂ।
ಭೀರ ಸುಖದೊಳಿರೆಂದರುಪುವ॥ ॥೫॥

ಈ ಮೊಟ್ಟಮೊದಲನೆಯ ಗೀತೆಯೇ ಇಡೀ ಆಧ್ಯಾತ್ಮಿಕಮಾರ್ಗದ ಆದರ್ಶವನ್ನೂ, ರಹಸ್ಯವನ್ನೂ, ಗೊತ್ತುಗುರಿಗಳನ್ನೂ ಸುಂದರವಾಗಿ ಸಂಗ್ರಹವಾಗಿ ನಿರೂಪಿಸುತ್ತದೆ.

ನೋಡಲಾಗದೆ ದೇವ ನೋಡಲಾಗದೆ
ಕೂಡೆ ನಿನ್ನ ದಿಟ್ಟ ಮೂರು, ನಾಡೇಲೇಸು ಮಾಡಲೆನ್ನ॥

ಶಂಕರಾ ನೋಡು ನೀನೆನ್ನ ಪರಿಭವದ ಬಾಧೆಯನು।
ಕೃಪೆಮಾಡು ಬೇಗದೊಳಭಯವಿತ್ತು।

ಎಂದು ಮುಂತಾಗಿ ಶಿವನ ಕರುಣೆಯನ್ನು ಹಾರೈಸುವ ಭಕ್ತನ ಹೃದಯದ ಹಂಬಲವನ್ನು ಒಳಗೊಂಡು ಅನೇಕ ಹಾಡುಗಳು ತುಂಬಾ ಸುಂದರವಾಗಿ ಮೂಡಿಬಂದಿವೆ. ಅನಂತರ, ಸಾಧನೆಯ ಮಾರ್ಗಗಳನ್ನು, ಅನೇಕ ಯೋಗಗಳನ್ನು, ಶಿವಯೋಗದ ರಹಸ್ಯವನ್ನು—ಎಲ್ಲವನ್ನೂ ಅನುಭಾವಪೂರ್ವಕವಾಗಿ ನಿರೂಪಿಸಿದ್ದಾರೆ:

ಮನವೆಂಬ ಗಿಳಿಯನೊಯ್ಯರದೊಳೋವಿ ಮೆ।
ಲ್ಲನೆ ಮುದ್ದು ನುಡಿಗಲಿಸೆಲೆ ಮಾನಿನಿ ॥ಪ॥

ಆರು ಜಾಳಂದರವೆಸೆವಾಗ್ನೇಯ ಮಿಂ।
ಚೇರಿದ ರನ್ನ ಪಂಜರದೊಳಗೆ
ಮೂರು ವರ್ನದ ಕೋಲಿನ ಮೇಲೇರಿಸಿ, ಕಾಲ್ಗೆ।
ಪಾರದಂತಸು ಸರಪಣಿಯ ಹೂಡಿ ॥೧॥

ನಯನ ವಟ್ಟಲೊಳು ಚಿನ್ಮಯದಿನಿಗೆನೆ ಯೂಡಿ॥
ಸ್ವಯ ಸುನಾದದ ತನಿವಣ್ಣನಿತ್ತು
ಭಯವೀವ ರಿಪುವೆಂಬ ಚೀಲಿಯನೆಬ್ಬಟ್ಟಿ
ಪ್ರಿಯದೆ ಮೈದಡವಿ ಭಾವದ ಕೈಯೊಳು ॥೨॥

ನಾಮ ವಿದೂರ ನಿಸ್ಸೀಮ ನಿತ್ಯಾನಂದ।
ಧಾಮ ಬೋಧಾದ್ವಯಾನಂತರೂಪ
ನೇಮರಹಿತ ಶಂಭುಲಿಂಗವೆನಿಸುವಾತ್ಮಾ
ರಾಮನೆ ಶಿವಶಿವಯೆಂದೋದಿಸಿ ॥೩॥

ಹಾಗೆಯೇ

ಯೋಗಿ ನಿಜಾನಂದದೊಳು ನುಡಿಸುವ ವೀಣೆ
ರಾಗ ರಸದ ತರಂಗಿಣಿ ನೋಡು ರಮಣಿ

ಎಂದು ದೇಹವನ್ನು ವೀಣೆಗೆ ಹೋಲಿಸಿ ಯೌಗಿಕವಾದ ಆನಂದ ಸ್ವರೂಪದರ್ಶನವನ್ನು ಮಾಡಿಕೊಟ್ಟಿರುವ ಹಾಡನ್ನಾಗಲೀ

ಜಾಣನು ಲೌಕಿಕ ಪರಮಾರ್ಥವೆರಡನು
ಮಾಣದೆ ಕೂಡಿ ನಡೆಸುತಿಹನಿಂತು

ಎಂದು ಲೌಕಿಕ, ಪಾರಮಾರ್ಥವೆರಡರ ಸಮನ್ವಯವನ್ನು ಸುಂದರವಾದ ಸಾದೃಶ್ಯಗಳೊಡನೆ ಚಿತ್ರಿಸಿರುವ ಹಾಡನ್ನಾಗಲೀ ನೋಡಬಹುದು. ಸಾಧಕನ ದಿವ್ಯಜೀವನದಲ್ಲಿ ಚಿರಂತನವಾಗಿ ಮಾರ್ಗದರ್ಶಕವಾಗಿ ನಿಲ್ಲುವ ಮಹತ್ತರ ಅರ್ಥವನ್ನು ಅವರ ಹಾಡುಗಳು ಒಳಗೊಂಡಿವೆ. ಇನ್ನೂ ಅನೇಕ ಉದಾಹರಣೆಗಳನ್ನು ಕೊಡುವ ಆಕಾಂಕ್ಷೆಯನ್ನು ತಡೆಹಿಡಿದು ಈ ಕೊನೆಯ ಒಂದು ಹಾಡನ್ನು ಮಾತ್ರ ಉದಾಹರಿಸಬಹುದು :

ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ।
ಮಾತು ಮನಂಗಳಿಂದತ್ತತ್ತ ಮೀರಿದ। ಸಾತಿಶಯದ ನಿರುಪಾಧಿಕ
ನಿರ್ಮಲ ॥ಪ॥

ಶಿವಧರ್ಮ ನಾಳವೆಂತೆಂಬ ಕಂಬದ ಮೇಲೆ।
ಸುವಿವೇಕ ಹೃದಯಾಬ್ಜ, ಪಣತೆಯೊಳು॥
ಸವೆಯದ ಸದ್ಭಕ್ತಿ ರಸ ತೈಲ ತೀವಿದ।
ಪ್ರವಿಮಲ ಕಳೆಯೆಂಬ ವತ್ತಿವಿಡಿದು ದಿವ್ಯ ॥೧॥

ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ।
ಮಸ ಬುದ್ಧಿಯೆಂಬ ಕತ್ತಲೆಯಳಿಯೆ॥
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ।
ಪಸರಿಸಿ ಮಾಯಾ ಕಾಳಿಕೆ ಪೊರ್ದದನುಪಮ ॥೨॥

ಪ್ರಣವಾಕಾರದ ಗುಣ ಮೂರು ಮುಟ್ಟದೆ,
ಗಣನೆಗತೀತಾರ್ಥವೆನೆ ತೋರುವ॥
ಅಣುಮಾತ್ರ ಚಲನೆಯಿಲ್ಲದ ಮೋಕ್ಷಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ ॥೩॥

ಈ ಹಾಡಿನಲ್ಲಿ ಮೋಕ್ಷಚಿಂತಾಮಣಿಯೆನಿಸುವ ಪರಂಜ್ಯೋತಿಯನ್ನು ಬೆಳಗಿದ್ದಾರೆ ನಿಜಗುಣರು. ಅದರ ಬೆಳಕಿನಲ್ಲಿ ಸಾಧಕರು ಆತ್ಮವೀಕ್ಷಣೆ ಮಾಡಿಕೊಳ್ಳಬಹುದಾಗಿದೆ.

ಸರ್ಪಭೂಷಣ ಶಿವಯೋಗಿಗಳು ಇತ್ತೀಚಿನವರು. ಇವರು ನಿಜಗುಣರ ಆದರ್ಶವನ್ನೇ ಇಟ್ಟುಕೊಂಡು ರಚಿಸಿದ ತಮ್ಮ ಗ್ರಂಥಕ್ಕೆ ಕೊಟ್ಟಿರುವ ಹೆಸರು ' ಕೈವಲ್ಯ ಕಲ್ಪವಲ್ಲರಿ ' ಎಂಬುದು. ಅಂದರೆ ''ಆಧ್ಯಾತ್ಮದ ಅನುಭವವೆಂಬ ಕಲ್ಪವೃಕ್ಷದ ಮೇಲೆ ಏರಿದ ಬಳ್ಳಿ"—ಎಂದು ಕರೆದಿದ್ದಾರೆ. ಆದರೆ ಇದನ್ನು ಬಳ್ಳಿ ಎನ್ನುವುದಕ್ಕಿಂತ ನಿಜಗುಣರ ' ಕೈವಲ್ಯ ಪದ್ಧತಿ 'ಯೆಂಬ ವೃಕ್ಷದ ಮೇಲೆ ಕಸಿಮಾಡಿ ಕಟ್ಟಿದ ಹೊಸದೊಂದು ಆಧ್ಯಾತ್ಮಿಕ ಕೊಂಬೆ ಎಂದು ಶ್ರೀಮಾನ್ ರಾನಡೆಯವರು ತಮ್ಮ ' Path way to God in Kannada literature' ಎಂಬ ಗ್ರಂಥದಲ್ಲಿ ಹೇಳಿದ ಮಾತು ಅರ್ಥವತ್ತಾಗಿದೆ. ನಿಜಗುಣರ ಅನುಭಾವ ಮಾರ್ಗ, ಸರ್ಪ ಭೂಷಣರ ಕೃತಿಗಳಲ್ಲಿ ಇನ್ನೂ ಉಜ್ವಲವಾಗಿ ಮೂಡಿ ಮುಂದುವರಿಯಿತು.

ಇದನ್ನು ಸ್ಥೂಲವಾಗಿಯಾದರೂ ವಿವೇಚಿಸುವಷ್ಟು ಅವಕಾಶ ಇಲ್ಲಿಲ್ಲ. ಆದುದರಿಂದ ಒಂದೆರಡು ತತ್ವಗಳನ್ನು ಉದಾಹರಿಸುವಷ್ಟರಿಂದಲೇ ತೃಪ್ತವಾಗಬೇಕಾಗಿದೆ :

ಕಾಯ ಕಾಂತಾರವ ಹೊಕ್ಕು ಬೇಂಟೆಯನಾಡಿ
ಮಾಯಾಮೋಹದ ಮೃಗಗಳ ಕೊಲ್ಲಿರೋ

ಕೋಪವೆಂದೆಂಬುವ ಹಿರಿಯ ಹುಲಿಗಳುಂಟು
ಪಾಪವೆಂದೆಂಬ ಸೂಕರಗಳುಂಟು।
ಚಾಪಲ್ಯಗುಣಗಳೆಂದೆಂಬ ಜಿಂಕೆಗಳುಂಟು
ಕಾಪಟ್ಯವೆಂದೆಂಬ ನರಿಗಳುಂಟು॥ ॥೧॥

ಮೆರೆವಷ್ಟ ಮದಗಳೆಂದೆಂಬ ಕೋಣಗಳುಂಟು।
ಬರಿಯ ಡಂಭಗಳೆಂಬ ಕರಡಿಯುಂಟು
ಉರಿವ ಮತ್ಸರ ಬುದ್ಧಿಯೆಂಬ ಕೇಸರಿಯುಂಟು
ಮರವೆಯೆಂದೆಂಬುವ ಗಜಗಳುಂಟು॥ ॥೨॥

ಪರಮ ಸದ್ಭಕ್ತಿಯೆಂದೆಂಬ ಬಿಲ್ಲನೆ ಮಾಡಿ
ವಿರತಿಯೆಂದೆಂಬ ಸಿಂಜಿನಿಯ ಹೂಡಿ।
ಅರಿವೆಂಬ ಬಾಣದೊಳವನೆಚ್ಚು ಕೆಡಹುತೆ
ಗುರುಸಿದ್ಧನಂಘ್ರಿಗಳ್ಗ ಪಹಾರಿಸಿ॥ ॥೩॥

ಇನ್ನೊಂದು ಕಡೆಯಲ್ಲಿ ಶರೀರವನ್ನು ಹೊಲಕ್ಕೆ ಹೋಲಿಸಿ "ಶರೀರವೆಂದೆಂಬುವ ಹೊಲನ ಹಸನುಮಾಡಿ ಪರತತ್ತ್ವ ಬೆಳೆಯನು ಬೆಳೆದುಣ್ಣಿರೋ" ಎನ್ನುತ್ತಾರೆ. ಮತ್ತೊಂದು ಕಡೆ

ತನುವೆ ಪಂಪಾಕ್ಷೇತ್ರ, ತನ್ನ
ಮನವೇ ದೇವಸ್ಥಾನವಲ್ಲಿ
ಮಿನುಪ ಜೀವನೆ ವಿರೂಪಾಕ್ಷೇಶ

ಎಂದು ದೇಹದಲ್ಲಿಯೇ ದೇಗುಲವನ್ನು ಕಂಡು ಅಲ್ಲಿ ವಿರೂಪಾಕ್ಷನ ಅನುಭಾವವನ್ನು ಪಡೆಯುತ್ತಾರೆ. ದೇಹವನ್ನೇ ಶ್ರೀಶೈಲ ಪರ್ವತಕ್ಕೆ ಹೋಲಿಸಿ, ಈ ದೇಹವೆಂಬ ಶ್ರೀಗಿರಿಯಲ್ಲಿ ಸಾಧಕ ಹೇಗೆ ಯಾತ್ರೆಯನ್ನು ಮಾಡಬೇಕೆಂಬುದನ್ನು ಒಂದು ತತ್ತ್ವದಲ್ಲಿ ಅನುಭಾವಪೂರ್ವಕವಾಗಿ ಚಿತ್ರಿಸಿದ್ದಾರೆ:

ಶ್ರೀಗಿರಿಯ ಸುಕ್ಷೇತ್ರಕಿಂದು
ಪೋಗಿ ಯಾತ್ರೆಯ ಮಾಡಿ ಬಂದೆ
ಶ್ರೀಗಿರಿಯು ಶರೀರದೊಳಗುಂಟು।

ಓಂ ಶ್ರೀ ಗುರುಸಿದ್ಧ
ಯೋಗಿ ಜನರಿಗೆ ಮರ್ಮವು ಬೇರುಂಟು॥

ಎಂದು ಪ್ರಾರಂಭವಾಗುವ ಆ ತತ್ತ್ವದಲ್ಲಿ ಶ್ರೀಗಿರಿಯ ರಹಸ್ಯವನ್ನೂ, ಯೋಗದ ಮರ್ಮವನ್ನೂ ಬಹಳ ಅರ್ಥಗರ್ಭಿತವಾದ ರೀತಿಯಲ್ಲಿ ಪ್ರಕಟಪಡಿಸಿದ್ದಾರೆ. ಸಾಧನೆಯ ಮಾರ್ಗವನ್ನೂ, ಶಿವಯೋಗದ ರಹಸ್ಯವನ್ನೂ, ಆ ನಿಲವಿನಲ್ಲಿ ನಿಂತ ಯೋಗಿಯ ಅನುಭವವನ್ನೂ ಅವರ ಅನೇಕ ತತ್ತ್ವಗಳು ಸುಂದರವಾಗಿ ನಿರೂಪಿಸುತ್ತಿವೆ. ಗುಪ್ತಯೋಗಿಯ ಲಕ್ಷಣವನ್ನು ಹೇಳಿರುವ ಒಂದು ತತ್ತ್ವವನ್ನು ಮಾತ್ರ ಇಲ್ಲಿ ನೋಡಬಹುದು.

ಯೋಗಿಯಲ್ಲವೇ। ಗುಪ್ತ। ಯೋಗಿಯಲ್ಲವೇ,
ಮೇಗಣಖಿಲ ಮುದ್ರೆಗಳ। ರಾಗದೊಳಗೆ ತಳೆದ ಗೃಹಿಯು ॥ಪ॥

ಶಮೆಯೆನಿಪ್ಪ ಕಚ್ಚೆಗಟ್ಟಿ। ಶಾಂತಿಯಂತರೀಯವುಟ್ಟು।
ದಮೆಯೆನಿಪ್ಪ ಕಾಪಿಯಂಬರವನು ವೇಷ್ಟಿಸಿ॥
ಮಮತೆಯೆಂಬ ಮನೆಯ ಬಿಟ್ಟು।
ಮಾಯೆಯೆಂಬ ಸತಿಯನುಳಿದು।
ಸಮತೆಯೆಂಬುವಾಶ್ರಮವನು ಹೊಂದಿ
ರಮಿಸುತಿರ್ಪ ಗೃಹಿಯೇ ಯೋಗಿಯಲ್ಲವೇ॥ ॥೧॥

ವಿರತಿಯೆಂಬ ಭಸಿತದೊಡೆದು। ಹರುಷವೆಂಬ ಪಾತ್ರೆಗೊಂಡು।
ಗುರು ಸುಖೋಕ್ತಿಯೆಂಬ ಕುಂಡಲಗಳ ಭೂಷಿಸಿ।
ಅರಿವೆನಿಪ್ಪ ದಂಡವಿಡಿದು। ಕರುಣಯೋಗವಟ್ಟವಾಂತು।
ದುರಿತ ಪುಣ್ಯವೆಂಬ ಪಾದುಕೆಗಳ ಮೆಟ್ಟಿನಿಂದ ಗೃಹಿಯೆ ॥೨॥

ಸತ್ತೆನಿಪ್ಪ ಭಿಕ್ಷೆಯುಂಡು। ಚಿತ್ತೆನಿಸುವ ಜಲವನೀಂಟಿ।
ತತ್ತ್ವವಿವರವೆಂಬ ದೇಶಗಳನು ಚರಿಸುತೆ।
ಚಿತ್ತವೆಂಬ ಗುಹೆಯೊಳೊರಗಿ। ನಿತ್ಯ ಸುಖದ ನಿದ್ದೆಗೈದು।
ಮತ್ತೆ ಭವದ ಪೂರ್ವವಳಿದು। ಶ್ರೀ ಗುರುಸಿದ್ಧನೆನಿಪ
ಗೃಹಿಯೆ ॥೩॥

ಒಬ್ಬೊಬ್ಬ ಗೃಹಸ್ಥನೂ ಇಂತಹ ಸನ್ಯಾಸಿಯಾಗಬೇಕೆಂಬುದು ಸರ್ಪಭೂಷಣರು ಲೌಕಿಕ ಜಗತ್ತಿಗೆ ಕೊಡುವ ನಿತ್ಯನೂತನ ಸಂದೇಶ.

ಇನ್ನೂ ಇತ್ತೀಚೆಗೆ ಆಗಿಹೋದ ಅನುಭಾವಿಗಳು ಶಿಶುನಾಳ ಷರೀಫರು. ಇವರ ಜೀವನವನ್ನೂ ಸಾಧನೆಯನ್ನೂ ಕುರಿತ ಅಭ್ಯಾಸ ಇನ್ನೂ ನಡೆಯಬೇಕಾಗಿದೆ. ಇವರ ತತ್ತ್ವಪದಗಳನ್ನು ಶಾಸ್ತ್ರೀಯವಾಗಿ ಮತ್ತು ಅಧಿಕೃತವಾಗಿ ಮುದ್ರಿಸಬೇಕಾಗಿದೆ. ಇವರ ಅನುಭಾವ ಗೀತೆಗಳು ಇಂದು ಮುಖ್ಯವಾಗಿ ಧಾರವಾಡದ ಕಡೆಯಲ್ಲಿ ಜನತೆಯ ನಾಲಗೆಯಮೇಲೆ ನಲಿಯುತ್ತಿವೆ. ಅವುಗಳನ್ನು ಪರಿಷ್ಕರಿಸಿ ಅವುಗಳ ಮಹತ್ವವನ್ನು ನಿರ್ದೇಶಿಸಬೇಕಾದ ಅವಶ್ಯಕತೆಯಿದೆ. ಈಗ ಅಲ್ಲಿ ಇಲ್ಲಿ ಅಚ್ಚಾಗಿರುವ, ಅನೇಕವೇಳೆ ಅಶುದ್ಧವಾಗಿರುವ ತತ್ತ್ವಗಳ ಸಹಾಯದಿಂದಲೇ ಅವರನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಸಾಮಾನ್ಯ ಜನಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿ, ಜನತೆಯ ಕಷ್ಟ ಸುಖಗಳನ್ನು ಅರಿತು, ಅವರಿಗೆ ತಿಳಿಯುವಂತೆ ಅವರ ಮಾತಿನಲ್ಲಿಯೇ ಅನುಭಾವವನ್ನು ಒಡಮೂಡಿಸಿದ್ದಾರೆ. ನಿತ್ಯ ಜೀವನದಲ್ಲಿ ನಡೆಯುವ ಸಾಮಾನ್ಯ ಘಟನೆಗಳೂ ಅವರನ್ನು ಪ್ರಚೋದಿಸಿ ಅನುಭವದತ್ತ ಹರಿಯುವುದಕ್ಕೆ ಅವಕಾಶವಾಗಿವೆ. ಅವರು ಆಡಿದುದೆಲ್ಲಾ ಆಧ್ಯಾತ್ಮವಾಯಿತು; ನೋಡಿ ನುಡಿದುದೆಲ್ಲಾ ಅನುಭಾವವಾಯಿತು.

ತಂದೆ ತಾಯಿಗಳು ತಮ್ಮ ಮಗಳನ್ನು ಮೊದಲನೆ ಬಾರಿ ಗಂಡನ ಮನೆಗೆ ಕಳುಹಿಸುತ್ತಿದ್ದಾರೆ. ಬೀಳ್ಕೊಡುವ ಸಮಯದಲ್ಲಿ, ಹುಟ್ಟಿ ಬೆಳೆದ ಮನೆಯನ್ನು ಅಗಲಿ ಹೋಗುವ ಮಗಳಿಗೆ ದುಃಖ ಉಕ್ಕಿಬರುತ್ತಿದೆ. ಅಳುತ್ತಿದ್ದಾಳೆ. ಈ ದೃಶ್ಯವನ್ನು ಕಂಡ ಶಿಶುನಾಳರಿಗೆ ಜೀವನವೇ ಹೀಗೆ ಒಂದು ಯಾತ್ರೆ ಅನಿಸುತ್ತದೆ. ಒಂದು ಗೀತೆ ಮೂಡಿಬರುತ್ತದೆ:

> ಅಳುಬ್ಯಾಡ ತಂಗಿ ಅಳುಬ್ಯಾಡ
> ನಿನ್ನ ಕಳುಹಬಂದವರೆಲ್ಲ ಉಳುಪಿಕೊಂಬುವರೇನೇ॥

ಯಾರು ಎಷ್ಟು ಅತ್ತರೂ ನಿನ್ನನ್ನು ಉಳಿಸಿಕೊಳ್ಳಲಾರರು, ಈಗ ನೀನು ಅಲ್ಲಿಗೆ ಹೋಗಲೇಬೇಕು—ಎಂದು ಹೇಳುತ್ತಾ

ಜೀವನಯಾತ್ರೆಯ ನಿಜವಾದ ನೆಲೆಯನ್ನು ಸೂಚಿಸುತ್ತಾರೆ. "ಅಳುತೀದೆ ಕೂಸು ಅಳುತೀದೆ" ಎಂದು ಆಗತಾನೇ ಹುಟ್ಟಿದ ಕೂಸಿನ ಅಳುವಿಕೆಯಿಂದ ಪ್ರಚೋದಿತರಾಗಿ ಒಂದು ಸುಂದರ ಆಧ್ಯಾತ್ಮಿಕ ಗೀತೆಯನ್ನು ಹೊರಹೊಮ್ಮಿಸಿದ್ದಾರೆ. ಹಾಗೆಯೇ:

"ಸೋರುತಿಹುದು ಮನೆಯ ಮಾಳಿಗಿ
ಅಜ್ಞಾನದಿಂದ ಸೋರುತಿಹುದು, ಮನೆಯ ಮಾಳಿಗಿ॥"

"ಮಂಗನ ನೋಡಿದೆ ನಾನೊಂದು ಮಂಗನ ನೋಡಿದೆ
ಕಂಗೆಡಿಸಿತು ಮನ ರಂಗಿಲಿಂದ ಎನ್ನ ಅಂಜುಸುತ್ತಿಹುದು"

"ನಗಬಾರದವ್ವಾ ಲಗುಬಿಗಿ ಸುಮ್ಮನೆ ಬೀಸವ್ವಾ"
"ಸಾಲೆಯ ನೋಡಿದಿಯಾ, ಸರಕಾರದ ಸಾಲೆಯ ನೋಡಿದಿಯಾ
ಸಾಲಿ ಸದ್ಗುರುವಿನ ಮಾಲು ಮಂಟಪದೊಳು
ಮೇಲೆ ಕಾಣಿಸುವುದು ಭೂಲೋಕದಲ್ಲಿ"

"ಹುಚ್ಚನಾಯಿ ಬಂದು ಕಚ್ಚುತಿಹುದು ತಂಗಿ
ಎಚ್ಚರದಲಿ ದಾರಿ ಹಿಡಿದು ನಡಿ"

"ಹಾವು ತುಳಿದೆನೆ ಮಾನಿನಿ, ಹಾವು ತುಳಿದೆನೆ,
ಹಾವು ತುಳಿದು ಹಾರಿನಿಂತ ಜೀವ ಕಳವಳಿಸಿತು ಗೆಳತಿ"

"ತೇರು ಸಾಗಿತು ನೋಡಲೇನಿರೇ
ಸರಸಿಜ ಮುಖಿ ಬಾರೆ"

ಹೀಗೆ ಕಣ್ಣಿಗೆ ಬಿದ್ದ ವಿಷಯದ ಮೇಲೆ ಅವರ ಅನುಭಾವದ ಗೀತೆ ಸಿದ್ಧವಾಗುತ್ತದೆ. ನೆಪಮಾತ್ರಕ್ಕೆ ವಸ್ತುವನ್ನು ಆಶ್ರಯಿಸಿ ಅದರಿಂದ ಮೇಲೇರಿ ಅನುಭವದ ಆಕಾಶದಲ್ಲಿ ವಿಹರಿಸುತ್ತದೆ ಅವರ ಪ್ರತಿಭೆ. ಅತಿಸಾಮಾನ್ಯವಾದ ಆಡುಮಾತಿನಲ್ಲಿಯೇ ಮಹತ್ತರವಾದ ಅರ್ಥವನ್ನು ಧ್ವನಿಸುವಂತೆ ಹೇಳಬಲ್ಲ ಸಹಜವಾದ ಶಕ್ತಿ ಅವರಿಗೆ ಅಳವಟ್ಟಿದೆ. ಸತಿ–ಪತಿ ಭಾವವನ್ನು ಕುರಿತು ಅವರು ಹೇಳಿರುವ ಈ ಒಂದು ತತ್ತ್ವ ಪದದೊಡನೆ ಇದನ್ನು ಮುಗಿಸಬಹುದು.

ಎಲ್ಲರಂತವನಲ್ಲ ಎನಗಂಡ,
ಬಲಿದನೆ ಪುಂಡ। ಎಲ್ಲರಂತವನಲ್ಲ॥
ಎಲ್ಲರಂತವನಲ್ಲ ಕೇಳೆ। ಸೊಲ್ಲು ಸೊಲ್ಲಿಗೆ ಬೈದು ಎನ್ನನು।
ಎಲ್ಲಿಗ್ಹೋಗಾದಾಂಗೆ ಮಾಡಿಟ್ಟ। ಕಾಲ್ಮುರಿದುಬಿಟ್ಟ
ಎಲ್ಲರಂತವ ॥ಪ॥

ಮಾತೆ ಪಿತರ ಮನೆಯೊಳಿರುತಿರಲು
ಮನಸೋತು ಮೋಹದ॥
ಪ್ರೀತಿಗೆಳತೆರ ಮಾತಿನೋಲಿರಲು।
ಮೈನೆರೆದು ಮಾಯದಿ ಘಾತವಾಯಿತು
ಯೌವನವು ಬರಲು। ಹೀಗಾಗಿ ಇರಲು॥
ದೂತೆ ಕೇಳೆಮ್ಮವರ ಸೋಬನ
ರೀತಿ ಚಾರವನೆಲ್ಲ ತೀರಿಸಿ
ಆತನೊಳು ಮೈ ಹೊಂದಿಕೆಯ ಮಾಡಿ। ಮಮತೇಲಿಕೂಡಿ
॥೧॥

ಅಕ್ಕ ತಂಗಿಯರಾರು ಮಂದಿಗಳ। ಅಗಲಿಸಿದನೈವರ।
ಕಕ್ಕುಲಾತಿಯ ಅಣ್ಣ ತಮ್ಮಗಳ।
ನದರಿಕ್ಕಿ ಮೇಲಕೆ ನೋಡಗೊಡದೇ ಹತ್ತು ದಿಕ್ಕುಗಳ।
ಮಾಡಿದನೆ ಮರುಳ॥
ತೆಕ್ಕೆಯೊಳು ಬಿಗಿದಪ್ಪಿ ಸುರತದಿ
ತಕ್ಕಸುಖ ತಾಂಬೂಲ ರಸದೊಳು। ಕಿಕ್ಕಿ ಬಲು ಅಕ್ಕರತೆಯೊಳು
ನಗುತಾ ಬಲುಸುಗುಣ ನೀತ ॥೨॥
ಅತ್ತೆ ಮಾವನ ಮನೆಯ ಬಿಡಿಸಿದನು। ಎನ್ನನ್ನು ತಂದು।
ರತ್ನ ಜ್ಯೋತಿಯ ಪ್ರಭೆಯೊಳಿಡಿಸಿದನು।
ಮೊದಲಿರ್ದ ಮೂವರ। ಮಕ್ಕಳೈವರ ಮಮತೆಗೆಡಿಸಿದನು
ಎನಬಿಟ್ಟು ತಾನು॥
ಎತ್ತ ಹೋಗದೆ ಚಿತ್ತವಗಲದೆ, ಗೊತ್ತಿನಲ್ಲಿ ಕಾಯ್ದು ಎನ್ನನು।
ಮುತ್ತಿನಾ ಮೂಗುತಿಯ ಕೊಟ್ಟಾನೆ।
ನಯದಿಂದಲಿಟ್ಟನೆ...॥

ಹೀಗೆ ಮುಂದುವರಿಯುತ್ತದೆ. ಏಕನಾದದ ಹಿನ್ನೆಲೆಯಲ್ಲಿ, ಇದರದೇ ಆದ ಒಂದು ಧಾಟಿಯಲ್ಲಿ, ಬಲ್ಲವರು ಇದನ್ನು

ಹಾಡಿದಾಗ ಇದರ ಪೂರ್ಣ ಸ್ವಾರಸ್ಯ ಮನದಟ್ಟಾಗುತ್ತದೆ. 'ಜೀವ'ನನ್ನು ಉದ್ಧರಿಸುವ 'ಶಿವ'ನೆಂಬ ಗಂಡ ಎಲ್ಲರಂತವನಲ್ಲ. ಅವನು ಒಲಿದರೆ ಜೀವಸತಿ ಏನು ಸುಖವನ್ನು ಪಡಬಲ್ಲಳೆಂಬು ದನ್ನು ಮಾರ್ಮಿಕವಾಗಿ ನುಡಿದಿದ್ದಾರೆ ಶಿಶುನಾಳರು.

ಇದೇ ಮಾರ್ಗದಲ್ಲಿ ತತ್ತ್ವಪದಗಳ ಒಂದು ದೊಡ್ಡ ಸಮುದಾಯವೇ ಕನ್ನಡ ಸಾಹಿತ್ಯದಲ್ಲಿದೆ. ಜನಸಾಮಾನ್ಯರಲ್ಲೂ ಆಧ್ಯಾತ್ಮಿಕದ ಹೊಳೆಯನ್ನು ಹರಿಯಿಸಲು ಕಾರಣವಾಗಿದೆ. ಇದನ್ನು ಕುರಿತು ಪ್ರೌಢವಾದ ಅಭ್ಯಾಸ ಇನ್ನು ಹೆಚ್ಚು ಹೆಚ್ಚಾಗಿ ಆಗ ಬೇಕಾಗಿದೆ.

## ಕೊನೆಯ ಮಾತು

ಕನ್ನಡದಲ್ಲಿ ಅನುಭಾವ ಸಾಹಿತ್ಯದ ಪ್ರಮುಖವಾದ ಘಟ್ಟಗಳನ್ನು ಕುರಿತು ಇದುವರೆಗೂ ಬಹಳ ಸಂಕ್ಷೇಪವಾಗಿ ನೋಡಿದೆವು. ಶರಣ ಸಾಹಿತ್ಯ, ದಾಸ ಸಾಹಿತ್ಯ, ತತ್ತ್ವಸಾಹಿತ್ಯ—ಎಂಬ ಪ್ರಮುಖವಾದ ಮೂರು ರೂಪಗಳಲ್ಲಿ ಕನ್ನಡ ಸಾಹಿತ್ಯ ಅನುಭಾವವನ್ನು ಅಭಿವ್ಯಕ್ತಗೊಳಿಸಿರುವುದನ್ನು ವಿಹಂಗಮ ದೃಷ್ಟಿಯಿಂದ ವೀಕ್ಷಿಸಲಾಯಿತು. ಇಷ್ಟೇ ಅಲ್ಲದೆ ಇನ್ನೂ ಅನೇಕ ರೂಪಗಳಲ್ಲಿ, ಅನೇಕ ರೀತಿಗಳಲ್ಲಿ ಅನುಭಾವದ ಹೊಳಹನ್ನು ಕಾಣಬಹುದಾಗಿದೆ. ಜೈನ ಪುರಾಣಗಳ ಧರ್ಮದೃಷ್ಟಿಯಲ್ಲಿ ಹರಿಹರ ರಾಘವಾಂಕರ ಕಾವ್ಯವಾಣಿಯಲ್ಲಿ, ಕುಮಾರವ್ಯಾಸನ ಭಕ್ತಿಯ ಆವೇಶದಲ್ಲಿ, ರತ್ನಾಕರನ ತ್ಯಾಗ ಭೋಗ ಸಮನ್ವಯದಲ್ಲಿ, ಮಹಾಲಿಂಗರಂಗನ ಅನುಭವಾಮೃತದ ಅದ್ವೈತ ಸಿದ್ಧಾಂತದಲ್ಲಿ—ಈ ಅನುಭವದ ಒಂದೊಂದು ರೂಪವನ್ನು ಗುರುತಿಸಬಹುದು.

ಜೈನ ಪುರಾಣಗಳಲ್ಲಿ ಅಲ್ಲಲ್ಲಿ ಬರುವ ವೈರಾಗ್ಯದ ವರ್ಣನೆ, ತೀರ್ಥಂಕರನನ್ನು ಕುರಿತ ಪ್ರಾರ್ಥನೆ—ಇವುಗಳು ಮನಮುಟ್ಟು ವಂತಿವೆ :

ನಾನಾ ಯೋನಿಗಳೊಳ್ ಸುೞಿ
ದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆಗುಂ।
ಮಾನುಷ್ಯಮನತಿದಾರುಣ
ಮಾನಸ ಶಾರೀರ ದುಃಖ ಪೀಡಿತನಕ್ಕುಂ॥

ಕಷ್ಟಂ ದುಃಖಾನಳ ಪರಿ
ಪುಷ್ಟಂ ಚಿಃ ಗತಿ ಚತುಷ್ಟಯಂ ಪ್ರಾಣಿಗೆ ಸಂ।
ತುಷ್ಟತೆಯುನೆಯ್ದೆ ಪಡೆದುಮ
ಭೀಷ್ಟ ಸುಖಪ್ರದಮದೊಂದೆ ಮುಕ್ತಿ ಸ್ಥಾನಂ॥

ಎನಿತಾನುಮಂಬು ನಿಧಿಗಳ-
ನನೇಕ ನಾಕಂಗಳಲ್ಲಿ ಕುಡಿದುಂ ಪೊಯ್ತಿ।
ಲ್ಲೆನಗೆ ನರಭೋಗಮೆಂಬೀ
ಪನಿ ಪುಲ್ಲಂ ನೆಕ್ಕೆ ತೃಷ್ಣೆ ಪೇೞ್ ಪೋದಪುದೇ॥

ಆಕುಳನೆನಾಗಿ ಸುೞಿದೆನ-
ನಾಕುಳ ಮಪ್ಪೆಡೆಯುನಱಿಸಿ ಕಾಣೇಂ ಮೂಱುಂ।
ಲೋಕದೊಳಂ ನಿನ್ನಿರ್ಕೆಯೆ
ಲೋಕಾಗ್ರಮೆ ಸಂತಮದನೆ ಮಾಡೆಮಗರ್ಹಾ॥

ಭವನಿಗಳದ ತೊಡರಂ ಕಳೆ.
ಭವ ಜಳಧಿಯ ತಡಿಗೆ ಸಾರ್ಚು, ಭವ ಗಹನದುಪ।
ದ್ರವಮಂ ಕಿಡಿಸು ಭವಾಂತಕ
ಭವನಕ್ಕುಯ್ ತಡೆಯದೆನ್ನನಿಂ ಭವಮಥನಾ॥

ಎಂದು ಅರ್ಹಂತನನ್ನು ಬೇಡುವ ಪಂಪನನ್ನಾಗಲೀ ಅಥವಾ ನಾಗಚಂದ್ರನು ಹೇಳುವ ಈ ಕೆಳಗಿನ ಪ್ರಾರ್ಥನೆಯನ್ನಾಗಲೀ ಓದಿದಾಗ ಯಾರ ಮನಸ್ಸು ತಾನೇ ಕರಗದಿರದು!

ಜಯ ಜಿತ ವೃಜಿನ ಜಿನೇಶ್ವರ,
ದಯಾ ನದೀ ಪುಳಿನ ರಾಜ ಹಂಸ. ಭವಾಂಭೋ।
ಧಿಯ ತಡಿಯನೆಯ್ದಿಸೆನ್ನಂ
ನಯ ನಿಕ್ಷೇಪ ಪ್ರಮಾಣ ಮಾತ್ರದಿನರ್ಹಾ॥

ನೇವಾಳಮೆಂದು, ಕೆಲಬರ್
ಪಾವಂ ಪಿಡಿವಂತೆ, ದೇವ ನೀನಲ್ಲದರಂ।

ದೇವರಿವರೆಂದು ಪಿಡಿದಿ
ನ್ನೇವಿಧಿ ಪಟ್ಟರೊ ಮೋಹ ಮೂರ್ಛೆಯಿನರ್ಹಾ॥
ಆವುದು ಸುಖಮೆಂದೆಳೆಸುವ
ನಾವಸ್ತುವೆ ದುಃಖ ಹೇತು, ದುಃಖೋಪಶಮಂ।
ಜೀವಕ್ಕೆ ಸುಖ ಭ್ರಾಂತಿಯ
ನೀವುದು ಭಾವಿಪೊಡಸಾರಮೀ ಸಂಸಾರಂ॥
ನಿನಗೆ ರಸವೊಂದೆ ಶಾಂತಮೆ
ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾ।
ಹನಮಿರ್ದು ಮಿಕ್ಕರಸಮಂ
ಕನಸಿನೊಳಗಂ ನೆನೆಯದಂತು ಮಾಡೆನಗಾರ್ಹ॥

ಹೃದಯವನ್ನು ಆರ್ದ್ರಗೊಳಿಸಿ ಮನಸ್ಸನ್ನು ಕ್ಷಣಕಾಲವಾದರೂ ಅಂತರ್ಮುಖವನ್ನಾಗಿ ಮಾಡುವ ಇಂತಹ ಮಾತುಗಳು ಜೈನ ಪುರಾಣಗಳಲ್ಲಿ ಅಲ್ಲಲ್ಲಿ ಬರುತ್ತದೆ.

ಹರಿಹರನ ರಗಳೆಗಳಲ್ಲಿ ಮತ್ತು ಮುಖ್ಯವಾಗಿ ಅವನ ಪಂಪಾ ಶತಕ, ರಕ್ಷಾಶತಕಗಳಲ್ಲಿ ಮನಮುಟ್ಟುವಂತಹ ಅನುಭಾವದ ಅಭಿವ್ಯಕ್ತಿಯಿದೆ. ರತ್ನಾಕರನ ಶತಕಗಳಲ್ಲಿಯೂ ಮತ್ತು ಅವನ ಕಾವ್ಯ, ಭರತೇಶ ವೈಭವದಲ್ಲಿಯೂ ಅನುಭಾವದ ಇನ್ನೊಂದು ಮುಖ ಚಿತ್ರಿತವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಮಹಾಲಿಂಗ ರಂಗನ 'ಅನುಭವಾಮೃತ' ಕನ್ನಡದಲ್ಲಿ ಅತಿಶ್ರೇಷ್ಠವಾದ ಅನು ಭಾವ ಗ್ರಂಥಗಳಲ್ಲಿ ಒಂದು. ಅದ್ವೈತ ಸಿದ್ಧಾಂತ ಪ್ರತಿಪಾದಕ ವಾದ ಕನ್ನಡಗ್ರಂಥಗಳಲ್ಲೆಲ್ಲಾ ಇದು ಅತ್ಯುತ್ತಮವಾದು ದೆನ್ನಬಹುದು. ಹೀಗೆ ಕನ್ನಡದಲ್ಲಿ ಅನುಭಾವ ಸಾಹಿತ್ಯ ಬಹು ಮುಖವಾಗಿ ಬೆಳೆದಿದೆ. ಜೀವನದ ನಿರಂತರವಾದ ಹೋರಾಟಕ್ಕೆ ತನ್ನದೇ ಆದ ಉತ್ತರವನ್ನು ಕೊಟ್ಟಿದೆ. ಸಾಧಕನಿಗೆ ಮಾರ್ಗದರ್ಶಕ ವಾಗಿದೆ. ಜೀವನಕ್ಕೆ ಬೆಳಕನ್ನೀಯಬಲ್ಲ ಶಕ್ತಿಯನ್ನು ಒಳಗೊಂಡು ದೇವವಾಣಿಯಾಗಿ ಪರಿಣಮಿಸಿದೆ.

WO 21857—MUPM—10,000—2-12-1980

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರ ವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ಟಿ. ಎನ್. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ಟಿ. ಎಸ್. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣ
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯಿ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಉ. ಕಾ. ಸುಬ್ಬರಾಯಾಚಾರ್
೫೬. ಶ್ರೀ ಸಮರ್ಥರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ